

# ನಿರಂಜನಜಂಗಮವಂಶದರ್ಪಣ






ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ
ಡಂಬಳ - ಗದಗ

ವೀರಶೈವ ನೂತನ ಸಾಹಿತ್ಯರತ್ನಮಾಲೆ : ಒಂದು

# ನಿರಂಜನ ಜಂಗಮವಂಶದರ್ಪಣ

ಬಸವಪ್ಪ ವೀರಪ್ಪ ಕೋಟಿ

ವೀರಶೈವ ಅಧ್ಯಯನ ಸಂಸ್ಥೆ,
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ-ಗದಗ

NIRAJANA JANGAMA VANSHADARAPNA

Edited by : Late Basavappa Veerappa Koti.

Publisher :
Sri Jagadguru Tontadarya Sansthan Math
Dambal-Gadag.

1978

ಬೆಲೆ : ೩-೦೦



ಪ್ರಥಮ ಆವೃತ್ತಿ- ೧೯೦೯
ದ್ವಿತೀಯ ಆವೃತ್ತಿ- ೧೯೭೮

ಪ್ರತಿಗಳು ದೊರೆಯುವ ಸ್ಥಳ :
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ ಗದಗ

ಮುದ್ರಕರು :
ವಿದ್ಯಾವಾಹಿನಿ ವಿದ್ಯುನ್ಮುದ್ರಣ (ಪುಸ್ತಕ ವಿಭಾಗ)
ಗಂಗಾಪೂರಪೇಟ ಗದಗ



ಶ್ರೀ ಮದನಾದಿ ನಿರಂಜನ ಜಗದ್ಗುರು
## ಶ್ರೀ ತೋಂಟದ ಸಿದ್ಧಲಿಂಗಶಿವಯೋಗಿಗಳು

# ಪ್ರಕಾಶಕರ ನುಡಿ

ಹದಿನೈದನೆಯ ಶತಮಾನದಲ್ಲಿ ವೀರಶೈವಧರ್ಮ, ಸಮಾಜ, ಸಾಹಿತ್ಯ, ಸಂಸ್ಕೃತಿಗಳ ಪುನರುದ್ಧಾರಕರಾಗಿ ಅವತಾರವೆತ್ತಿದ ಶ್ರೀ ಜಗದ್ಗುರು ತೋಂಟದ ಸಿದ್ಧಲಿಂಗ ಶಿವಯೋಗಿಗಳಿಗೂ ಅವರ ಶಿಷ್ಯ–ಪ್ರಶಿಷ್ಯ ಪರಂಪರೆಗೂ ಕನ್ನಡ ಸಾಹಿತ್ಯಚರಿತ್ರೆಯಲ್ಲಿ ಅತ್ಯಂತ ಗೌರವಾನ್ವಿತ ಸ್ಥಾನ ದೊರಕುತ್ತದೆ. ವಚನ ಮತ್ತು ಕಾವ್ಯರೂಪದ ಸೃಜನಸಾಹಿತ್ಯ ನಿರ್ಮಾಣದೊಂದಿಗೆ ಸಮಗ್ರವಚನ ಸಾಹಿತ್ಯದ ಅಕ್ಷಯನಿಧಿಯನ್ನು ಹೊರತೆಗೆದು ಶೋಧಿಸಿ, ಸಂಸ್ಕರಿಸಿ, ಸಂಪಾದಿಸಿ, ವಚಿಸಿ, ವ್ಯಾಖ್ಯಾನಿಸಿ ಕನ್ನಡ ಸಾಹಿತ್ಯದಲ್ಲಿ 'ಸಂಪಾದನ ಸಮಯ'ವೆಂಬ ಮಾರ್ಗಕ್ಕೆ ಕಾರಣಕರ್ತರಾದ ಹಿರಿಮೆ ಅವರದಾಗಿದೆ.

ತೋಂಟದ ಸಿದ್ಧಲಿಂಗಯತಿಗಳ ಪ್ರಭಾವಲಯದಲ್ಲಿ ಬೆಳಗುವ ಸಾಹಿತ್ಯ ಜ್ಯೋತಿಗಳು ಅನಂತ. ಜಾಗತಿಕ ತತ್ತ್ವಮಹಾಂತನೆನ್ನಿಸಿದ ಪ್ಲೇಟೋನ ಸಂಭಾಷಣೆಗೂ ಮಿಗಿಲೆನ್ನಿಸುವ "ಶೂನ್ಯ ಸಂಪಾದನೆ" ಶಿಲ್ಪದ ಮಹಾರೂವಾರಿಗಳಾದ ಹಲಗೆಯಾರ್ಯ, ಗುಮ್ಮಳಾಪುರದ ಸಿದ್ಧಲಿಂಗ, ಗೂಳೂರು ಸಿದ್ಧವೀರಣ್ಣೊಡೆಯ, ವಚನ ಸಂಕಲನಕಾರರೆಂದು ಪ್ರಸಿದ್ಧರಾದ ಸಂಪಾದನೆಯ ಚೆನ್ನಂಜೆದೇವ, ಸಂಪಾದನೆಯ ಸಿದ್ಧವೀರಣಾರ್ಯ, ಸಂಪಾದನೆಯ ಗುರುಶಾಂತದೇವ, ಸ್ವತಂತ್ರವಚನಕಾರರಾಗಿ ಖ್ಯಾತಿವೆತ್ತ ಸ್ವತಂತ್ರ ಸಿದ್ಧಲಿಂಗ, ಘನಲಿಂಗದೇವ, ಯಜುರ್ವೇದಭಾಷ್ಯಕ್ಕೆ ಕನ್ನಡ ಟೀಕೆ ಬರೆದ ಗುರುನಂಜ, ವಚನಗಳ ಟೀಕಾಕಾರ ಸೋಮಶೇಖರ ಶಿವಯೋಗಿ, ಶ್ರೇಷ್ಠ ಪುರಾಣಗಳನ್ನು ರಚಿಸಿದ ಗುಬ್ಬಿಯ ಮಲ್ಲಣಾರ್ಯ, ಮಲ್ಲಿಕಾರ್ಜುನ, ಚೇರಮಾಂಕ, ಸಂಪಾದನೆಯ ಪರ್ವತೇಶ– ಹೀಗೆ ನೂರಾರು ಕವಿಗಳ, ಸಾವಿರಾರು ಸಾಹಿತ್ಯಕೃತಿಗಳ ನಿರ್ಮಾಣಕ್ಕೆ ಕಾರಣರಾದವರು, ತೋಂಟದ ಸಿದ್ಧಲಿಂಗಯತಿಗಳು. ಹೀಗಾಗಿ ಸಾಹಿತ್ಯ ಕೃತಿಗಳನ್ನು ಸಂಗ್ರಹಿಸುವುದು, ಶೋಧಿಸುವುದು ಪ್ರಕಟಿಸುವುದು, ಪ್ರಚುರಪಡಿಸುವುದು ತೋಂಟದ ಸಿದ್ಧಲಿಂಗ ಪರಂಪರೆಯವರ ಆದ್ಯಕರ್ತವ್ಯವಾಗಿದೆ.

ಈ ಕರ್ತವ್ಯ ಪ್ರಜ್ಞೆಗೆ ಬದ್ಧವಾಗಿ ಶ್ರೀಮಠದಲ್ಲಿ "ವೀರಶೈವ ಅಧ್ಯಯನ ಸಂಸ್ಥೆ" ಅಸ್ತಿತ್ವಕ್ಕೆ ಬಂದಿದ್ದು, ಅದರ ಇಂದಿನ ಧ್ಯೇಯಗಳು ಇಂತಿವೆ :

೧. ವೀರಶೈವ ಹಸ್ತಪ್ರತಿ, ಪ್ರಾಚ್ಯವಸ್ತುಗಳ ಸಂಗ್ರಹ ಮತ್ತು ಸಂರಕ್ಷಣೆ.
೨. ವೀರಶೈವ ಪುರಾತನ, ನೂತನ ಕೃತಿಗಳ ಗ್ರಂಥಭಾಂಡಾರ ಸ್ಥಾಪನೆ.
೩. "ವೀರಶೈವ ಪುರಾತನಸಾಹಿತ್ಯರತ್ನಮಾಲೆ" ಹೆಸರಿನಲ್ಲಿ ಪ್ರಾಚೀನ ಕೃತಿಗಳ ಪ್ರಕಟನೆ.

೪. "ವೀರಶೈವ ನೂತನಸಾಹಿತ್ಯರತ್ನಮಾಲಿ" ಹೆಸರಿನಲ್ಲಿ ಧರ್ಮ, ಸಂಸ್ಕೃತಿ, ಸಾಹಿತ್ಯ, ಸಮಾಜಗಳಿಗೆ ಸಂಬಂಧಪಟ್ಟ ಕೃತಿಗಳನ್ನು ಪ್ರಕಟಿಸುವುದು.

೫. ವಿದ್ವಾಂಸರಿಂದ "ವೀರಶೈವ ಗೋಷ್ಠಿ" ನಡೆಸುವುದು.

ಈಗ 'ವೀರಶೈವ ನೂತನಸಾಹಿತ್ಯರತ್ನಮಾಲೆ'ಯು ಅಂಗವಾಗಿ, ಶ್ರೀಮಠದ ಮೂಲಕ ೧೯೦೯ ರಲ್ಲಿ ಪ್ರಕಟವಾಗಿದ್ದ 'ನಿರಂಜನ ಜಂಗಮವಂಶ ದರ್ಪಣ' ಕೃತಿಯು ದ್ವಿತೀಯಆವೃತ್ತಿ ಬೆಳಕಿಗೆ ಬರುತ್ತಲಿದೆ. ಶ್ರೀ ತೋಂಟದಾರ್ಯ ಪೀಠದ ಪರಮಭಕ್ತರಾಗಿದ್ದ ಲಿಂ. ಬಸವಪ್ಪ ವೀರಪ್ಪ ಕೋಟಿ ಅವರು ಇದರ ಕರ್ತೃಗಳು. ಆ ಕಾಲದಲ್ಲಿ ಚರಿತ್ರೆಗೆ ಸಂಬಂಧಪಟ್ಟ ವಿಷಯಗಳನ್ನು ಸಂಗ್ರಹಿಸಿದ, ಪುಸ್ತಕರೂಪದಲ್ಲಿ ಯೋಜಿಸಿದ ಅವರ ಸಾಹಸ ಶ್ಲಾಘನೀಯ. ಈ ಕೃತಿಯನ್ನು ಹೊರತರುವುದರ ಮೂಲಕ ಬಹುಜನಗಳ ಬಹುದಿನದ ಬೇಡಿಕೆಯನ್ನು ಈಡೇರಿಸಿ ಕೊಡುತ್ತಿದೆ, "ವೀರಶೈವ ಅಧ್ಯಯನಸಂಸ್ಥೆ".

ಆವೃತ್ತಿಯು ಭಾಷಾಪರಿಷ್ಕರಣ ಗ್ರಂಥವಿನ್ಯಾಸ ಕಾರ್ಯಗಳಲ್ಲಿ ಮನಮುಟ್ಟಿ ದುಡಿದ ಶ್ರೀಮಠದ ಅಭಿಮಾನಿಗಳಾದ ಪಂ. ನಾಗಭೂಷಣ ಶಾಸ್ತ್ರಿಗಳು ಹಾಗೂ ಡಾ. ಎಂ. ಎಂ. ಕಲಬುರ್ಗಿಯವರಿಗೂ ಅಂದವಾಗಿ ಅಚ್ಚುಗೊಳಿಸಿದ ವಿದ್ಯಾವಾಹಿನಿ ವಿದ್ಯುನ್ಮುದ್ರಣದ ಒಡೆಯರಾದ ಶ್ರೀ ಫ. ಶಿ. ಭಾಂಡಗೆ ಅವರಿಗೂ ಶ್ರೀ ತೋಂಟದ ಶಿವಯೋಗಿ ಸಕಲಸನ್ಮಂಗಲವನ್ನೀಯಲಿ.

ಗದಗ
೪-೪-೧೯೭೮

ಪ್ರಕಾಶಕರು
**ವೀರಶೈವ ಅಧ್ಯಯನ ಸಂಸ್ಥೆ**
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ
ಡಂಬಳ-ಗದಗ

# ಪ್ರಸ್ತಾವನೆ

ಪೂರ್ವಕಾಲದಲ್ಲಿ ವೀರಶೈವಮತದವರೆನಿಸಿ, ಈ ಮತಕ್ಕೆ ಅಸಾಧಾರಣವಾದ ಅಲಂಕಾರವೆನಿಸಿದ ಶಿವಯೋಗಿಗಳು ಮತ್ತು ಶಿವಶರಣರು ಇವರೇ ಮೊದಲಾದ ಮಹಾಪುರುಷರ ಚರಿತ್ರೆಗಳನ್ನು ಸಂಗ್ರಹಿಸಿ ಸರ್ವರಿಗೂ ಸುಲಭಸಾಧ್ಯವಾಗಿ ಗೋಚರಿಸುವಂತೆ ಬರೆದಿಡುವುದು ಅತ್ಯಂತ ಶ್ಲಾಘ್ಯವಾದ ಕೃತ್ಯವಾಗಿದೆ. ಯಾಕೆಂದರೆ ಆ ಮಹನೀಯರು ಮಾಡಿದ ಅತ್ಯದ್ಭುತ ಕೃತ್ಯಗಳು ಈಗಿನವರ ಸ್ಮರಣೆಯಲ್ಲಿ ಉಳಿದು, ಈ ಕಾಲದಲ್ಲಿ ದುರವಸ್ಥೆಯಲ್ಲಿರುವ ವೀರಶೈವಮತದ ಉಚ್ಚ ಸ್ಥಿತಿ ಪ್ರಾಪ್ತಿಗಾಗಿ ಸ್ವಸ್ವಯೋಗ್ಯತಾನುರೂಪವಾದ ಪ್ರಯತ್ನವನ್ನು ಕೈಕೊಳ್ಳು ವುದಕ್ಕೆ ಈಗಿನವರನ್ನು ಪ್ರೋತ್ಸಾಹಗೊಳಿಸುತ್ತವೆ. ಹ್ಯಾಗೆಂದರೆ ತನ್ನಕಿಂತಲೂ ಯಾವುದೇ ಅಂಶದಲ್ಲಿ ದೊಡ್ಡವನೆನಿಸಿಕೊಂಡವನು ತನ್ನ ಯೋಗ್ಯತೆಗೆ ಸರಿಯಾದ ದೊಡ್ಡ ಕೆಲಸವನ್ನುಮಾಡಿದರೆ ಅದನ್ನು ಸ್ಮರಿಸಿ, ಸಣ್ಣವನಾದರೂ ತನ್ನ ಯೋಗ್ಯ ತೆಗೆ ಸರಿಯಾದ ಕೆಲಸವನ್ನು ಮಾಡಿ ಕೀರ್ತಿಯನ್ನು ಪಡೆಯಬೇಕೆಂಬ ಇಚ್ಛೆಯು ಸಹಜವಾಗಿ ಹುಟ್ಟಬೇಕಾಗುತ್ತದೆ. ಆದರೆ ಆ ದೊಡ್ಡ ಮನುಷ್ಯನ ಸಂಗತಿಯೇ ಸ್ಮರಣೆಯಲ್ಲಿ ಉಳಿಯತಕ್ಕ ಯತ್ನವನ್ನು ಮಾಡದಿದ್ದರೆ, ಅದು ಹೇಗೆ ಮಹ ತ್ವಾಕಾಂಕ್ಷೆಯುಳ್ಳವರಿಗೆ ಉದಾಹರಣವಾದೀತು ಅಥವಾ ಆ ಮಹನೀಯರ ಕೃತ್ಯ ದಲ್ಲಿಯ ಲಕ್ಷಾಂಶವನ್ನಾದರೂ ಮಾಡಲು ನಾವು ಶಕ್ತರಲ್ಲದಿದ್ದರೂ ಅವರ ಉಪ ಕೃತಿಗಳನ್ನಾದರೂ ಮನಸ್ಸಿನಲ್ಲಿ ಭಾವಿಸಿ ಧನ್ಯರಾಗತಕ್ಕದ್ದು ಜನ್ಮದ ಸಾರ್ಥಕತ್ವಕ್ಕೆ ಮೂಲಕಾರಣವಾಗುತ್ತದೆ. ಈ ಮೊದಲಾದ ಪ್ರಬಲ ಕಾರಣಗಳನ್ನು ಮನಸ್ಸಿ ನಲ್ಲಿ ತಂದು, 'ನಿರಂಜನಜಂಗಮವಂಶದರ್ಪಣವೆಂಬೀ' ಸಂಕ್ಷಿಪ್ತ ಪ್ರಬಂಧವನ್ನು ನಿರಂಜನಗುರು ಸಿದ್ಧೇಶಮಹಾಪ್ರಭು ಕೃಪಾಲೇಶದಿಂದ ಪ್ರಾಪ್ತವಾದ ಪ್ರತಿಭಾತಿ ಶಯದಿಂದ ಸಂಗ್ರಹಿಸಿರುತ್ತೇನೆ. ಇದರಲ್ಲಿ ನಿರಂಜನಗುರುಮೂರ್ತಿಯು ಪ್ರಭು ನಾಮಧೇಯದಿಂದ ಕಲಿಯುಗದಲ್ಲಿ ಅವತರಿಸಿದ ಸಂಗತಿಯು ಅಚಿಂತ್ಯಾಗ ಮೋಕ್ತಪ್ರಕಾರವಾಗಿ ಬರೆಯಲ್ಪಟ್ಟಿದೆ. ಇದು ಅಲ್ಲದೆ ಆ ಪ್ರಭುವರನು ಇದೇ ಕಲಿಯುಗದಲ್ಲಿ ಎರಡನೆಯ ಆವೃತ್ತಿಯಲ್ಲಿ ಶ್ರೀ ತೋಂಟದ ಸಿದ್ಧೇಶ್ವರಾಭಿಧಾನ ದಿಂದ ಅವತರಿಸಿ ಭೂತಲವನ್ನು ಪಾವನಗೊಳಿಸಿದ ಸಂಗತಿಯು ಶ್ರೀ ಸಿದ್ಧೇಶ್ವರ ಪುರಾಣ, ಚನ್ನಬಸವೇಶ್ವರಪುರಾಣಗಳಲ್ಲಿ ಪ್ರತಿಪಾದಿಸಲ್ಪಟ್ಟ ರೀತಿಯನ್ನನುಸರಿಸಿ ಬರೆಯಲ್ಪಟ್ಟಿದೆ. ಮತ್ತು ಆ ಸಿದ್ಧೇಶ್ವರಸ್ವಾಮಿಗಳಾದಿಯಾಗಿ, ಈ ವರೆಗೂ ಈ ಭೂತಲವನ್ನು ವಿಶಾಲಕೀರ್ತಿಜಲದಿಂದ ನಿರ್ಮಲಗೊಳಿಸಿದ ಹದಿನೈದುಜನ ಸ್ವಾಮಿಗಳ ಪವಿತ್ರಚರಿತ್ರೆಗಳೂ ಮತ್ತು ಈವಾಗ್ಯ ಭಕ್ತವೃಂದಮನೋನಂದನ

ವನದಲ್ಲಿ ಮೆರೆಯುತ್ತಿರ್ಪ ಮಂದಾರವೃಕ್ಷದಂತಿರುವ ಹದಿನಾರನೆಯ ಶೂನ್ಯಪೀಠದ ಶ್ರೀ ಸಿದ್ಧೇಶ್ವರಸ್ವಾಮಿಗಳ ದಿಗಂಗನಾನಾಸಾಮಣಿಯಂತೆ ಥಳಥಳಿಸುವ ವಿಶದವಾದ ಕೀರ್ತಿಗೆ ದ್ಯೋತಕವಾದ ಸತ್ಕೃತ್ಯವೂ-ಹೀಗೆ ಹದಿನಾರುಜನ ಮಹಾಸ್ವಾಮಿಗಳ ಸಚ್ಚರಿತ್ರಗಳು ಸಂಗ್ರಹಿಸಿ ಬರೆಯಿಸಲ್ಪಟ್ಟಿವೆ. ಮತ್ತು ಪರಮಪೂಜ್ಯರಾದಂಥ ಪರಮಾತ್ಮಸ್ವರೂಪರಾದಂಥ ಜಗದ್ಗುರುಗಳಾದಂಥ ಮಹಾಸ್ವಾಮಿಗಳ ಚರಿತ್ರೆಗಳನ್ನು ಸಮಸ್ತಭಕ್ತಮಾಹೇಶ್ವರರಿಗೆ ನಿತ್ಯಪಾರಾಯಣಕ್ಕೆ ಸುಲಭವಾಗುವಂತೆ ಪೂರ್ವಜರ ಲೇಖನಗಳಿಂದ ಸಂಗ್ರಹಿಸಿ ಪ್ರಕಟಗೊಳಿಸಿದ್ದೇನೇ ಹೊರತು ಸ್ವಕಪೋಲಕಲ್ಪಿತ ಯುಕ್ತಿಯೇನೂ ಇರುವುದಿಲ್ಲ. ಆದ್ದರಿಂದ ಗುಣಜ್ಞರು ಇದರಲ್ಲಿರುವ ಗುಣಾಂಶವನ್ನು ಸ್ವೀಕರಿಸಿ ನನ್ನ ಪ್ರಯತ್ನವನ್ನು ಸಫಲಗೊಳಿಸುವಿರೆಂದು ಅಪೇಕ್ಷಿಸುತ್ತೇನೆ.

ಗದಗ
೧೯೦೯ ಇಸ್ವಿ

ವೀರಶೈವ ಜನಸೇವಕ,
**ಬಸವಪ್ಪಾ ವೀರಪ್ಪಾ ಕೋಟಿ**

ಶ್ರೀಗುರುಸಿದ್ಧೇಶ್ವರಾಯ ತೇ ನಮಃ

ವಂದೇ ಶ್ರೀಚರಲಿಂಗಮದ್ವಯಮನಾದ್ಯಂತಂ ಪ್ರಭಾನ್ಯಕೃತಾ- ।
ನಂತಾರ್ಕಂ ಪರಮೇಶಭಾಸುರಶಿಖಾಚಕ್ರಾಂತರೇ ಸಂಸ್ಫುರತ್ ।
ಪಂಚಾಚಾರ್ಯಸಮರ್ಪಿತಂ ಶಶಿಭೃತಾ ತತ್ಪ್ರಾರ್ಥಿತೇನ ಸ್ವಯಂ ।
ಸಾಕ್ಷಿತ್ವೇನ ಸಮೀಕ್ಷ್ಯಮಾಣಮಖಿಲಂ ಕರ್ಮೋರ್ಜಿತ್ಯಯಂ ತತ್ಕೃತಂ ॥

## ನಿರಂಜನಜಂಗಮದ ಪ್ರಥಮಾವತಾರ ಕಲಿಯುಗದಲ್ಲಿ ಪ್ರಭುನಾಮಕದಿಂದ:

ಸೃಷ್ಟಿಯ ಪೂರ್ವದಲ್ಲಿ ಅಖಂಡವಾಗಿಯೂ, ಆನಂದಮಯವಾಗಿಯೂ ದಿಕ್ಕಾಲಾದ್ಯನವಚ್ಛಿನ್ನವಾಗಿಯೂ ನಿರವಯವವಾಗಿಯೂ ನಿರ್ಮಲವಾಗಿಯೂ ಅತ್ಯತಿಷ್ಠದ್ದಶಾಂಗುಲವೆಂಬ ಶ್ರುತಿಯ ಮೇರೆಗೆ ಸಕಲಬ್ರಹ್ಮಾಂಡಾಪೇಕ್ಷಯಾ ಅಧಿಕವಾಗಿಯೂ ನಿಗಮಾಗಮಾದಿಗಳಲ್ಲಿ ನಿರಂಜನಲಿಂಗವೆಂದು ಹೊಗಳಿಸಿಕೊಳ್ಳುವುದಾಗಿಯೂ ಇರುವ ಪರಾತ್ಪರವಾದ ವಸ್ತುವು ಒಂದೇ ಶೋಭಿಸುತ್ತಿತ್ತು. ಆ ವಸ್ತುವು ಘನೀಭೂತವಾದ ಘೃತದಲ್ಲಿ ಗುಪ್ತವಾದ ದ್ರವದಂತೆ ತನ್ನಲ್ಲಿ ಅಡಕವಾದ ವಿಚಿತ್ರರೂಪವಾದ ಸಕಲಚರಾಚರಪ್ರಪಂಚಮಂಡಲವನ್ನು ಹೊರಪಡಿಸಲಿಚ್ಛೆಯಿಂದ ಚಂದ್ರಾರ್ಕವೈಶ್ವಾನರರೂಪವಾದ ಲೋಚನತ್ರಯದಿಂದಲೂ ನವಾಂಬುದಶ್ಯಾಮವಾದ ಕಂಧರದಿಂದಲೂ ಶಿರೋಗ್ರದೇದೀಪ್ಯಮಾನಸುಧಾಕರಖಂಡದಿಂದಲೂ ಹಾರಾದ್ಯಾಭರಣೀಕೃತಸರೀಸೃಪಕಲಾಪದಿಂದಲೂ ಪಂಚಾಸ್ಯದಶಭುಜಗಳಿಂದಲೂ ಯುಕ್ತವಾದ ಭಸ್ಮೋದ್ಧೂಳಿತಸರ್ವಾಂಗವಾಗಿಯೂ ಅತಿಭಾಸ್ವತ್ಕೋಟಿಪ್ರಭಾನ್ವಿತವಾಗಿಯೂ ದೇದೀಪ್ಯಮಾನವಾದ ಒಂದಾನೊಂದು ಸಾಕಾರವಸ್ತುವಾಗಿ ಪರಿಣಮಿಸಿತು. ಆ ವಸ್ತುವೇ ಇಚ್ಛಾಜ್ಞಾನಕ್ರಿಯಾರೂಪವಾದ ಶಕ್ತಿಯಿಂದ ಯುಕ್ತವಾಗಿ ಸಾಂಬಸದಾಶಿವಮೂರ್ತಿಯೆಂದು ನಿಗಮಾಗಮತತ್ತ್ವಜ್ಞರಿಂದ ಹೇಳಲ್ಪಡುತ್ತದೆ. ಆ ಶ್ರೀಸಾಂಬಮೂರ್ತಿಯು ತನ್ನ ಪ್ರಥಮಪುತ್ರನಾದ ಬ್ರಹ್ಮನಿಗೆ ವೇದವನ್ನುಪದೇಶಿಸಿ ಯಾವತ್ಪ್ರಪಂಚಮಂಡಲದ ಸರ್ಗವಿಧಿಯಲ್ಲಿ ನಿಯೋಜಿಸಲ್ಪಟ್ಟನು. ಇದಕ್ಕೆ ಪ್ರಮಾಣವು, ಶ್ವೇತಾಶ್ವತರ ಶ್ರುತಿಯಲ್ಲಿ:

'ಅಥ ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ' ಮತ್ತು ಶ್ರುತ್ಯಂತರೇ 'ವಿಶ್ವಾಧಿಕೋ ರುದ್ರೋ ಮಹರ್ಷಿ

ರ್ಹಿರಣ್ಯಗರ್ಭಂ| ಜನಯಾಮಾಸ ಪೂರ್ವಂ| ಹಿರಣ್ಯಗರ್ಭಂ ಜನಯಾಮಿ ಪೂರ್ವಂ ವೇದಾಂಶ್ಚ ತಸ್ಮೈ ಪ್ರಹಿಣೋಮಿ ಯೋಽಹಂ'

ಎಂಬ ಶಿವಗೀತಾವಚನವು, ಪ್ರಕೃತ ಶ್ರುತಿಯ ಅರ್ಥವನ್ನು ಸ್ಪಷ್ಟೀಕರಿಸುತ್ತದೆ. ಶಿವನಿಯೋಗದಿಂದ ಸೃಷ್ಟಿಯನ್ನು ಮಾಡಲು ತೊಡಗಿದ ಬ್ರಹ್ಮನು ಸೃಷ್ಟ್ಯುಪಾಯವನ್ನರಿಯದೆ ಪುನಃ ಶ್ರೀಸಾಂಬಶಿವನನ್ನು ಕುರಿತು ಸೃಷ್ಟ್ಯುಪಾಯವನ್ನು ಬೋಧಿಸಲು ಪ್ರಾರ್ಥಿಸಿದನು. ಶಿವನಿಂದ ಉಪಾಯವನ್ನರಿತುಕೊಂಡಾಗ್ಯೂ ಸೃಷ್ಟಿಸಲು ಶಕ್ತನಾಗದೆ ಪ್ರತ್ಯಕ್ಷಾನುಭವದಿಂದ ಸೃಷ್ಟಿಸಲು ತೊಡಗಬೇಕೆಂದು ಇಚ್ಛಿಸಿ ಸೃಷ್ಟಿಸಿ ತೋರಿಸುವುದಾಗಿ ಮತ್ತು ಪರಶಿವನನ್ನು ಪ್ರಾರ್ಥಿಸಲಾಗಿ ಬ್ರಹ್ಮದಯಾವಶಂವದನಾದ ಶ್ರೀಸಾಂಬಸದಾಶಿವನು ಸರ್ವವಿಧದಿಂದಲೂ ತನಗೆ ಸಮಾನರಾದ ಪ್ರಮಥರನ್ನು ಸೃಷ್ಟಿಸಿದನು. ಇದಕ್ಕೆ ಪ್ರಮಾಣವು, ಸ್ಕಾಂದಪುರಾಣಾಂತರ್ಗತ ಸೂತಸಂಹಿತೆಯಲ್ಲಿ :

ದೃಷ್ಟ್ವಾ ನತ್ವಾ ಮಹಾಭಕ್ತ್ಯಾ। ಸ್ತುತ್ವಾ ಹೃಷ್ಟಃ ಪ್ರಜಾಪತಿಃ।
ಉವಾಚ ದೇವದೇವೇಶಂ। ಸೃಜೇಮಾ ವಿವಿಧಾಃ ಪ್ರಜಾಃ ॥ ೧ ॥

ಬ್ರಹ್ಮಣೋ ವಚನಂ ದೇವಃ। ಶ್ರುತ್ವಾ ವಿಶ್ವಜಗತ್ಪತಿಃ।
ಸಸರ್ಜ ಸ್ವಾತ್ಮನಾ ತುಲ್ಯಾನ್। ಶಿವೋ ರುದ್ರಾನ್ ದ್ವಿಜೋತ್ತಮಾಃ ॥ ೨ ॥

ಇವರಲ್ಲಿ ಶ್ರೀಪರಶಿವನ ಸದ್ಯೋಜಾತವಾಮದೇವಾಘೋರತತ್ಪುರುಷೇಶಾನಾಖ್ಯಮುಖಪಂಚಕದಿಂದೆ ಘಂಟಾಕರ್ಣ, ಗಜಕರ್ಣ, ರೇಣುಕ, ದಾರುಕ, ವಿಶ್ವಕರ್ಣರೆಂಬೀಯೈವರು ಮುಖ್ಯರಾಗಿ ಜನಿಸಿದರು. ಹೀಗೆ ಪರಮಾತ್ಮನು ತನಗೆ ಸಮಾನರಾದ ಪ್ರಮಥರನ್ನು ಸೃಷ್ಟಿಸಲಾಗಿ ಬ್ರಹ್ಮನು ಪರಮಾತ್ಮನನ್ನು ಕುರಿತು ಪ್ರಾರ್ಥಿಸಿದ್ದೇನಂದರೆ – ಸ್ವಾಮಿಯೇ ತಾವು ಸೃಷ್ಟಿಸಿದ ಪ್ರಜೆರು ಜನನಮರಣರೂಪವಾದ ಸಂಸಾರದಿಂದ ಬದ್ಧರಾಗದೇ ಇರುವವರು; ಜನನಮರಣಬದ್ಧರಾದ ಪ್ರಜೆರನ್ನು ಸೃಜಿಸಬೇಕೆಂದು ಬಿನ್ನೈಸಿದನು. ಆಗಲಾ ಪರಮಾತ್ಮನು ಮುಗುಳುನಗೆಯಿಂದ ಹೇಳಿದ್ದೇನಂದರೆ– ಎಲೈ ಪುತ್ರನಾದ ಬ್ರಹ್ಮನೇ, ನಾನು ಜನನಮರಣಾತ್ಮಕಪ್ರಪಂಚದಲ್ಲಿ ತೊಳಲುತ್ತಿರುವ ಪ್ರಾಣಿಗಳನ್ನು ಹುಟ್ಟಿಸುವುದಿಲ್ಲವು; ಈವಾಗ್ಗೆ ಸೃಷ್ಟ್ಯುಪಾಯವನ್ನರಿತವನಾದ ನೀನೇ ಈ ವಿಧವಾಗಿ ಪ್ರಾಣಿಗಳನ್ನು ಸೃಜಿಸು. ಪ್ರಪಂಚದಲ್ಲಿ ಸಿಲ್ಕಿ ತೊಳಲುತ್ತಿರುವ ಆ ನಿನ್ನ ಪ್ರಜೆರನ್ನು ಗುರುರೂಪಿಯಾಗಿ ನಾನು ಅವರನ್ನು ಸಂಸಾರಪಾಶದಿಂದ ಬಿಡಿಸುವೆನೆಂದು ಹೇಳಿ ಅದೃಶ್ಯನಾದನು. ಆ ಬಳಿಕ ಶಿವಪ್ರಸಾದಬಲದಿಂದ ಬ್ರಹ್ಮನು ಪೃಥಿವ್ಯಾದಿಗಗನಾಂತಗಳಾದ ಪಂಚಭೂತಗಳನ್ನು ತೆಗೆದುಕೊಂಡು

ನಾನಾತರವಾದ ಪ್ರಪಂಚವನ್ನು ಸೃಷ್ಟಿಸಿದನು. ಈ ಅರ್ಥದಲ್ಲಿ ಪ್ರಮಾಣವು, ಸೂತಸಂಹಿತೆಯಲ್ಲಿ:

ತಂ ಪುನಶ್ಚಾಽಹ ದೇವೇಶಂ । ಬ್ರಹ್ಮಾ ವಿಶ್ವಜಗತ್ಪ್ರಭುಃ ।
ಜನ್ಮಮೃತ್ಯುಭಯಾವಿಷ್ಟಾಃ। ಸೃಜ ದೇವ ಪ್ರಜಾ ಇತಿ ॥ ೧ ॥

ಏವಂ ಶ್ರುತ್ವಾ ಮಹಾದೇವಃ । ಪ್ರಹಸ್ಯ ಕರುಣಾನಿಧಿಃ ।
ಪ್ರೋವಾಚ ಶೋಭನಾಃ ಸ್ರಕ್ಷ್ಯೇ । ನಾಹಂ ಬ್ರಹ್ಮನ್ ಪ್ರಜಾ ಇಮಾಃ ॥ ೨ ॥

ಅಹಂ ದುಃಖೋದಧೌ ಮಗ್ನಾ । ಉದ್ಧರಾಮಿ ಪ್ರಜಾ ಇಮಾಃ ॥
ಸಮ್ಯಗ್ಜ್ಞಾನಪ್ರದಾನೇನ । ಗುರುಮೂರ್ತಿಪರಿಗ್ರಹಃ ॥ ೩ ॥

ತ್ವಮೇವ ಸೃಜ ದುಃಖಾಢ್ಯಾಃ । ಪ್ರಜಾಃ ಸರ್ವಾಃ ಪ್ರಜಾಪತೇ ।
ಇತ್ಯುಕ್ತ್ವಾಽಂತರ್ಹಿತಃ ಶ್ರೀಮಾನ್ । ಭಗವಾನ್ ನೀಲಲೋಹಿತಃ ॥ ೪ ॥

ತತಸ್ತಸ್ಯ ಪ್ರಸಾದೇನ । ವಿವಾರ್ಯರ್ಕಮಲಾಸನಃ ।
ರುದ್ರಾನತ್ಯಂತ ಕಲ್ಯಾಣಾನ್ । ಪ್ರಜಾಸೃಷ್ಟೌಪ್ರವರ್ತಕಾನ್ ॥ ೫ ॥

ಶಬ್ದಾದೀನಿ ಚ ಭೂತಾನಿ । ಪಂಚೀಕೃತ್ಯ ದ್ವಿಜೋತ್ತಮಾಃ ।
ತೇಭ್ಯಃ ಸ್ಥೂಲಾಂಬರಂ ವಾಯುಂ । ವಹ್ನಿಂ ಚೈವ ಜಲಂ ಮಹೀಂ ॥ ೬ ॥

ಹೀಗೆ ಬ್ರಹ್ಮನು ದೃಶ್ಯಪ್ರಪಂಚವನ್ನು ನಿರ್ಮಿಸಿದ ಬಳಿಕ ಪಂಚಾರಾಧ್ಯರು ಶ್ರೀ ಪರಮೇಶ್ವರನ ಆಜ್ಞೆಯಿಂದ ಭೂಲೋಕದಲ್ಲಿ ವೀರಶೈವಪರಮರಹಸ್ಯವಾದ ಲಿಂಗಾಂಗಸಾಮರಸ್ಯವುಳ್ಳ ಅಷ್ಟಾವರಣಮಹಾತ್ಮೆಯನ್ನು ಮಾಡಲ್ಪಟ್ಟ ಶಿವ ದೀಕ್ಷಾನಂತರದಲ್ಲಿ ಉಪದೇಶಿಸಿ ಭಕ್ತರನ್ನುದ್ಧರಿಸಿ ಭಕ್ತನಿಂದಕರನ್ನು ನಿರ್ಮೂಲ ಮಾಡಿ ಶಿವಮತವನ್ನು ವಿಸ್ತರಿಸಲೋಸುಗ ಭೂಲೋಕವನ್ನು ಕುರಿತು ಅವತರಿಸುವ ಸಮಯದಲ್ಲಿ ಆ ಪಂಚಾರಾಧ್ಯರು– ಎಲೈ ಕರುಣಾಮೂರ್ತಿಯಾದ ಶಂಕರನೇ ನಿನ್ನಾಜ್ಞೆಯಿಂದೆ ಲೋಕದಲ್ಲಿ ವೀರಶೈವತತ್ತ್ವವನ್ನುಪದೇಶಿಸಿ ಸದ್ಭಕ್ತರನ್ನುದ್ಧರಿಸಲಾಗಿ, 'ಶಿಷ್ಯಪಾಪಂ ಗುರೋರಪಿ' ಎಂದು ನೀನು ನಿನ್ನ ಆಗಮದಲ್ಲಿಯೇ ನಿರೂಪಿಸುವುದರಿಂದ ನಮಗೆ ತೊಡಗಿಕೊಂಡ ಶಿಷ್ಯಪಾಪವನ್ನು ನಿವೃತ್ತಿಗೊಳಿಸುವರಾರೆಂದು ಶ್ರೀ ಶಂಕರನನ್ನು ಪ್ರಾರ್ಥಿಸಲಾಗಿ ಶಂಕರನು ತನ್ನ ಶಿಖಾಚಕ್ರದಲ್ಲಿ ತೇಜೋರಾಶಿಯಾಗಿ ಪ್ರಕಾಶಿಸುವ ನಿರಂಜನಾತ್ಮಕವಾದ ಚರಲಿಂಗವನ್ನು ಹೊರಗೆ ತೆಗೆದು ಆ ಪಂಚಾರಾಧ್ಯರನ್ನು ಕುರಿತು ನಿರೂಪಿಸಿದ್ದೇನೆಂದರೆ- ಇದು ಯಾವ ವಿಧವಾದ ದೋಷದಿಂದ ಸೋಂಕಲ್ಪಡದಿರುವ ಜಂಗಮಲಿಂಗವು. ನೀವು ಭಕ್ತೋದ್ಧರಣದಿಂದೆ ನಿಮಗೆ ಸೋಂಕಿದ ಭಕ್ತಪಾಪವನ್ನು ಈ ಜಂಗಮಲಿಂಗದ ಶುಶ್ರೂಷೆಯಿಂದ ಕಳೆದುಕೊಳ್ಳಿರಿ. ಈ ಜಂಗಮಲಿಂಗವನ್ನೇ ಸಾಕ್ಷಿಯಾಗಿಟ್ಟುಕೊಂಡು ಯಾವತ್ಕರ್ಮಗಳನ್ನಾಚರಿಸಲಾಗಿ ನಿಮಗೆ ಈ ಚರಲಿಂಗ ಪಾದೋದಕಪ್ರಸಾದಸೇವನೆಯಿಂದ ಯಾವ ತೆರನಾದ ಪಾಪವು ತಟ್ಟುವುದಿಲ್ಲವೆಂದು ನಿರೂಪಿಸಿ ಆ ಜಂಗಮಲಿಂಗವನ್ನು ತಮ್ಮೊಡನೆ ಕರೆದುಕೊಂಡು

ಭೂಲೋಕವನ್ನು ಕುರಿತು ಅವತರಿಸುವುದಕ್ಕೆ ಆಜ್ಞಾಪಿಸಿದನು. ಈ ಅರ್ಥದಲ್ಲಿ ಪ್ರಮಾಣವು, ಅಚಿಂತ್ಯಾಗಮದ ದಶಮಪಟಲದಲ್ಲಿ:

ಪಂಚವಕ್ತ್ರಗಣೇಶೇನ । ಪ್ರಾರ್ಥಿತೇನ ಮಯಾ ಶಿವೇ ।
ಆಲೋಕ್ಯ ಕರುಣಾದೃಷ್ಟ್ಯಾ । ಚೋಕ್ತಂ ಪಂಚಗಣಾನ್ ಪ್ರತಿ ॥ ೧ ॥

ಯೂಯಮಾಸಾದ್ಯ ಭೂಲೋಕಂ । ಪಂಚಮಾನಾಂ ಯಥಾಕ್ರಮಂ ।
ದೀಕ್ಷಾಂ ಕೃತ್ವಾऽಥ ಮದ್ಭಕ್ತಿಂ । ಸ್ಥಾಪಯಿತ್ವಾ ಮಹೀತಲೇ ॥ ೨ ॥

ಮನ್ಮತಂ ಪ್ರಬಲೀಕೃತ್ಯ । ಹತ್ವಾ ಮದ್ಭಕ್ತನಿಂದಕಾನ್ ।
ಅಷ್ಟಾವರ್ಣಮಹತ್ವಂ ತು । ಉಪದಿಶ್ಯ ಯಥಾಕ್ರಮಂ ॥ ೩ ॥

ತತ್ರತ್ಯಾನಾಂ ಪಂಚಮಾನಾ । ಮಾಗಂತವ್ಯಾ ಇತಃ ಪುನಃ ।
ಮಯೀತ್ಯುಕ್ತೇ ಗಣಾಸ್ತೇ ಮಾಂ । ಪ್ರಣಮ್ಯಾಪ್ಯೂಚುರಾದರಾತ್ ॥ ೪ ॥

ದೇವದೇವ ಜಗನ್ನಾಥ । ಕರುಣಾಕರ ಶಂಕರ ।
ಆಗಮೇ ಭವತಾ ಚೋಕ್ತಂ । ಶಿಷ್ಯಪಾಪಂ ಗುರೋರಿತಿ ॥ ೫ ॥

ತಸ್ಮಾತ್ತಸ್ಯಾಃ ಕ್ರಿಯಾಯಾಶ್ಚ । ವಯಂ ಭೀತಾಸ್ಸದಾಶಿವ ।
ತೇಷ್ವಿತ್ಯುಕ್ತೇಷು ಭೋ ದೇವಿ । ಗಣಾಧೀಶೇಷು ಪಂಚಸು ॥ ೬ ॥

ಮಚ್ಛಿಖಾಚಕ್ರಮಧ್ಯಸ್ಥಂ । ಚರಲಿಂಗಂ ನಿರಂಜನಂ ।
ಕೃತ್ವಾ ಬಹಿರ್ಗತಂ ತೇಭ್ಯೋ । ಮಯಾ ಪ್ರೋಕ್ತಮಿದಂ ವಚಃ ॥ ೭ ॥

ಭವದ್ಭಿಸ್ಸೇವ್ಯತಾಮೇತತ್ । ಸೃಷ್ಟ್ಯಾದೌ ಮಮರೂಪಕಂ ।
ಚರಾಚರಮಹಾಲಿಂಗ । ಮಿತಿಖ್ಯಾತಂ ಗಣಾಧಿಪಾಃ ॥ ೮ ॥

ತಯೋರಚರಲಿಂಗಾಚ್ಚ । ಚರಲಿಂಗಂ ವಿಶಿಷ್ಯತೇ ।
ಮಮೇತಚ್ಚರಲಿಂಗಂ ತು । ಮತ್ತಶ್ಶತಗುಣಾಧಿಕಂ ॥ ೯ ॥

ಯುಕ್ತೋऽಹಂ ಪರಯಾ ಶಕ್ತ್ಯಾ । ನಿರ್ಮುಕ್ತಮಿದಮರ್ಭಕಾಃ ।
ಇದಂ ತು ನಿಷ್ಕಲಂ ಜ್ಞೇಯಂ । ಸಕಲೋऽಹಂ ಗಣೇಶ್ವರಾಃ ॥ ೧೦ ॥

ಪ್ರಪಂಚವಿಮುಖಂ ಚೈತತ್ । ಪ್ರಪಂಚನಿಯುತೋऽಸ್ಮ್ಯಹಂ ।
ಏತಜ್ಜಂಗಮಲಿಂಗಸ್ಯ । ತೀರ್ಥಂ ಮೇ ಪರಮಾಮೃತಂ ॥ ೧೧ ॥

ಪ್ರಸಾದಂ ಗಣಪಂಚಾಸ್ಯಾ । ಮಮೈತಜ್ಜೀವನೌಷಧಂ ।
ಚರಸ್ಯ ಪಾದತೀರ್ಥೇನ । ಮಜ್ಜನಂ ಮೇ ಮುದಾಕರಂ ॥ ೧೨ ॥

ಭೂಮಾವೈ ಚರಲಿಂಗಂ ತು । ಚರಾಂಘ್ರಿಸ್ಪರ್ಶನಂ ವಿನಾ ।
ಪ್ರತಿಷ್ಠಿತಂ ಯದಿ ಭವೇ । ತ್ತಲ್ಲಿಂಗೇ ನಾಸ್ತಿ ಮತ್ಕಲಾ ॥ ೧೩ ॥

ತತ್ತೇಷಾಂ ಸ್ಥಿರಲಿಂಗಾನಾಂ । ಪ್ರಮಥಾನಾಂ ಮಮಾಪಿ ಚ ।
ಚರಪಾದಾಂಬುಜೋದ್ಭೂತಂ । ತೀರ್ಥಂ ಜೀವಮಿತಿ ಸ್ಮೃತಂ ॥ ೧೪ ॥

ಇದಂ ಚರಮಹಾಲಿಂಗಂ । ಸರ್ವಾನುಗ್ರಹಕಾರಣಂ ।
ಏತಜ್ಜಂಗಮಲಿಂಗೇನ । ಸಾಕಂ ಗತ್ವಾ ಮಹೀತಲಂ ॥ ೧೫ ॥

ದೀಕ್ಷಾಂ ಕೃತ್ವಾ ತಥಾ ತೇಷಾಂ । ಲಿಂಗಾನಾಂ ಜಂಗಮಸ್ಯ ಚ ।
ಪಾದತೀರ್ಥಪ್ರಸಾದಾಭ್ಯಾಂ ಸ್ನಾನಂ ಚಾರು ನಿವೇದನಂ ॥ ೧೬ ॥

ಕ್ರಿಯತೇ ಚೇತ್ತದಾ ತೇಷಾಂ । ಶಿಲಾಭಾವೋ ವಿನಶ್ಯತಿ ।
ತದೇವ ಯುಷ್ಮದಾದೀನಾಂ ಗುರುರೇತಸ್ಯ ಚಾಜ್ಞಯಾ ॥ ೧೭ ॥

ದೀಕ್ಷಾದಿಸರ್ವಕರ್ಮಾಣಿ । ಭವದ್ಭಿಃ ಕ್ರಿಯತಾಂ ಸದಾ ।
ಏವಮಾಚರತೋ ಯುಷ್ಮಾಂ । ಸ್ತೇಷಾಂ ಪಾಪಂ ನ ಲಿಪ್ಯತೇ ॥ ೧೮ ॥

ಆ ಚರಮಹಾಲಿಂಗವು ಕೃತಾದಿಯುಗಚತುಷ್ಟಯದಲ್ಲಿ ಪಂಚಾರಾಧ್ಯರಿಗೆ ಸಾಕ್ಷಿಯಾಗಿ ನಿರಂಜನ, ನಿರ್ಮಾಯ, ನಿಷ್ಕಲ, ಪ್ರಭುನಾಮಧೇಯಂಗಳಿಂದ ಭೂತಳದೊಳ್ ಪ್ರಕಾಶವಡೆದಿತು. ಪ್ರಭುನಾಮದಿಂದೆ ಕಲಿಯುಗದಲ್ಲಿ ಅವತರಿಸಿದ ಆ ನಿರಂಜನಚರಲಿಂಗವು ಕಲ್ಯಾಣನಗರದಲ್ಲಿ ದಿವ್ಯಪೀಠಮಧ್ಯದೊಳ್ ವಿರಾಜಿಸುತ್ತಿದ್ದಿತು. ಅದಕ್ಕೆ ಶೂನ್ಯಸಿಂಹಾಸನವೆಂದು ಅಭಿಯುಕ್ತರು ನಂಬಿದರು. ಈ ಅರ್ಥದಲ್ಲಿ ಪ್ರಮಾಣವು, ಇದೇ ಅಚಿಂತ್ಯಾಗಮದ ದಶಮಪಟಲದಲ್ಲಿ:

ಆದೌ ತಚ್ಚರಲಿಂಗಂ ತು । ನಿರಂಜನ ಇತಿಶ್ರುತಂ ।
ಭೂಮ್ಯಾಂ ತದೇವ ತ್ರೇತಾಯಾಂ । ನಿರ್ಮಾಯ ಇತಿ ಕೀರ್ತಿತಂ ॥ ೧ ॥

ದ್ವಾಪರೇ ನಿಷ್ಕಲಶ್ಚೇತಿ । ವಿಶ್ರುತಂ ಚ ತದೇವ ಹಿ ।
ಕಲೌ ಪ್ರಭುರಿತಿ ಖ್ಯಾತಂ । ನಾಮಾನ್ಯೇತಾನಿ ವೈ ಕ್ರಮಾತ್ ॥ ೨ ॥

ಭುವಿ ತತ್ಪ್ರಭುದೇವಸ್ಯ । ಪೀಠಂ ಕಲ್ಯಾಣಪತ್ತನೇ ।
ಶೂನ್ಯಸಿಂಹಾಸನಂ ಚೇತಿ । ತದೇವ ಪ್ರಥಿತಂ ಕಲೌ ॥ ೩ ॥

ಆ ಪ್ರಭುದೇವನು ಭೂಮಿಯಲ್ಲಿ ಸಂಚರಿಸಿ ಕೆಲವು ಕಾಲದ ವರೆಗೆ ಕಲ್ಯಾಣನಗರದಲ್ಲಿ ವಾಸಿಸಿ,ಅನಂತರದಲ್ಲಿ ಬಸವೇಶ, ಚೆನ್ನಬಸವೇಶ ಮೊದಲಾದ ಶಿವಶರಣರನ್ನು ಕಾಣಿಸಿಕೊಂಡು ಅವರಿಗೆ ದರ್ಶನಾಶೀರ್ವಾದಂಗಳನಿತ್ತು ತೆರಳುವಾಗ್ಗೆ ಚೆನ್ನಬಸವ, ಸಿದ್ಧರಾಮ ಮೊದಲಾದ ಶರಣತತಿಯು ತಮಗೆ ಷಟ್‌ಸ್ಥಲಜ್ಞಾನೋದಯವನ್ನು ಉಂಟುಮಾಡಿಕೊಡುವುದಾಗಿ ಪ್ರಾರ್ಥಿಸಿ, ಬಳಿಕಾ ಪ್ರಭುದೇವನು ಆ ಶರಣ ಸಮೂಹಕ್ಕೆ ನಿರೂಪಿಸಿದ್ದೇನಂದರೆ-ನೀವೀಗ ಷಟ್‌ಸ್ಥಲ ಸಂಪ್ರದಾಯವನ್ನರಿತವನಾದ ಚೆನ್ನಬಸವೇಶನಿಂದ ಷಟ್‌ಸ್ಥಲಮಾರ್ಗವನ್ನು ತಿಳಿದುಕೊಳ್ಳಿರಿ. ಕಾಲಾಂತರದಲ್ಲಿ ನಾನೇ ಬಂದು ಷಟ್‌ಸ್ಥಲಜ್ಞಾನವನ್ನುಂಟುಮಾಡಿಕೊಟ್ಟು ನಿಮ್ಮೆಲ್ಲರನ್ನು ಮುಕ್ತರನ್ನಾಗಿ ಮಾಡುವೆನೆಂದುಸುರಿ ಅದೃಶ್ಯತ್ವವನ್ನೈದಿದನು. ಈ ಮೇರೆಗೆ ಪ್ರಭುದೇವನು ಪ್ರಯಾಣವಂಗೈಯ್ಯಲು ಸಿದ್ಧರಾಮೇಶಪ್ರಭೃತಿಗಳು ಪುನಃ ಪ್ರಭುವರ್ಯನು ಇಲ್ಲಿಗೆ ತಿರುಗಿಬರುವ ಕಾಲವಾವುದು ಎಂದು ಚೆನ್ನಬಸವಣ್ಣನನ್ನು ಕುರಿತು ಪ್ರಶ್ನಂಗೈದರು. ಆಗಲಾ ಚೆನ್ನಬಸವಾರ್ಯನು ಹೇಳಿದ್ದೇನಂದರೆ— ಆ ಪ್ರಭುವರ್ಯನು ಕಾಶಿ, ಗೋಕರ್ಣ,

ಕೇದಾರ ಮುಂತಾದ ಪ್ರಸಿದ್ಧ ಕ್ಷೇತ್ರಗಳನ್ನು ಸಂಚರಿಸಿ ಸವಾಲಕ್ಷಪರ್ವತವನ್ನು ಕುರಿತು ಬಂದು ಅಲ್ಲಿ ಹನ್ನೆರಡು ವರ್ಷಗಳ ವರೆಗೆ ಯೋಗಸಮಾಧಿನಿಷ್ಠನಾಗಿ ಆನಂದದೊಳಿರುತಿರಲು ಐಕ್ಯಸ್ಥಲದ ಗುರುತನ್ನು ತಿಳಿದುಕೊಳ್ಳಬೇಕೆಂದು ಯೋಚಿಸುತ್ತಿದ್ದ ಬಸವೇಶ್ವರನ ಮನೋಭಾವವನ್ನು ತನ್ನ ಸಮಾಧಿದೃಷ್ಟಿಯಿಂದ ನೋಡಿ ಮನೋವೇಗದಿಂದ ಪುನಃ ಕಲ್ಯಾಣಕ್ಕೆ ಬರುವನು. ಆಗಲಾ ಬಸವೇಶ್ವರನು ಸಮಸ್ತಶರಣತತಿಯೊಡನೆ ಪ್ರಭುವರ್ಯನನ್ನು ಎದುರುಗೊಂಡು ಕರೆದು ಕೊಂಡು ಬಂದು ಆಧಾರಾದಿ ಷಟ್ಚಕ್ರಮಯವಾದ ಅನಂತಕೋಟಿಭಾಸ್ಕರರ ಪ್ರಭೆಯನ್ನು ಮೀರಿ ಥಳಥಳಿಸುತ್ತಿರುವ ಸ್ಥೂಲೇಂದ್ರಿಯಗಳಿಗೆ ಅಗೋಚರವಾದ ಶೂನ್ಯಪೀಠದಲ್ಲಿ ಕುಳ್ಳಿರಿಸಿ ಪೂಜಿಸುವನು. ಆ ಕಾಲದಲ್ಲಿ ನಮ್ಮೆಲ್ಲರಿಗೂ ಷಟ್‌ಸ್ಥಲ ಸಂಪಾದನೆಯನ್ನು ಮಾಡಿಸಿ ಐಕ್ಯಸ್ಥಲದ ಗುರುತನ್ನು ತೋರಿಸಿ ಬಸವೇಶ್ವರನ ಅನುಪಮವಾದ ಭಕ್ತಿರಸದಿಂದ ತೃಪ್ತನಾಗಿ ಅಲ್ಲಿಂದ ಹೊರಟು ಶ್ರೀಶೈಲಕ್ಕೆ ಬಂದು ಅಲ್ಲಿ ಗೋರಕ್ಷ ಮೊದಲಾದವರಿಗೆ ಮುಕ್ತಿಮಾರ್ಗವನ್ನು ತೋರಿಸಿ ಗುಪ್ತಕದಳಿ ಬನದಲ್ಲಿ ಬೈಲಾಗುವನು. ಆ ಬಳಿಕ ಬಸವೇಶನು ಪ್ರಭುವರ್ಯನು ಬೈಲಾದ ವಾರ್ತೆಯನ್ನು ತಿಳಿದು ಜಂಗಮರೂಪಧರನಾದ ಸಂಗಮನಾಥನಲ್ಲಿ ಕೂಡುವನು. ಆ ಬಳಿಕ ಸ್ವಲ್ಪ ದಿವಸಗಳನ್ನು ಕಳೆದು ನಾವೆಲ್ಲರು ಭೂಲೋಕವನ್ನು ಬಿಟ್ಟು ತೆರಳಲಾಗಿ ಕೆಲದಿನಗಳು ಕಳೆದುಹೋದ ಮೇಲೆ ಶಿವಭಕ್ತಿ ಶಿವಾಚಾರಪ್ರಚುರ ಮಾದ ಸನ್ಮಾರ್ಗವು ಕಪಟಶಾಸ್ತ್ರಧುರಂಧರರಾಗಿ ದುರುಪದೇಶದಿಂದ ಜನರನ್ನು ಬಲಾತ್ಕರಿಸಿ ತಮ್ಮ ದುರ್ಮತಕ್ಕೆ ಸೇರಿಸಿ ಅವರಿಗೆ ಸದಸದ್ವಿವೇಕಾಂಧತೆಯ ನ್ನುಂಟುಮಾಡುವ ಜೈನಚಾರ್ವಾಕಾದಿಗಳ ಬೆಳವಣಿಗೆಯಿಂದ ಖಿಲವಾಗಲು ಲೋಕದಲ್ಲಿ ಅತಿವೃಷ್ಟಿ ಮೊದಲಾದ ಈತಿಬಾಧೆಗಳು ತಲೆದೋರುತ್ತವೆ. ಇದರಿಂದ ಈ ಲೋಕದ ಯಾವತ್ತೂ ಪ್ರಾಣಿಗಳು ನಾನಾ ವಿಧಗಳಾದ ಸಂಕಟಗಳನ್ನು ಅನುಭವಿಸುತ್ತಿರಲು ಸಮಸ್ತಲೋಕಗಳ ಸಮವಿಷಮಾವಸ್ಥೆಗಳನ್ನು ಪರೀಕ್ಷಿಸಿ ವಿಷಮಾವಸ್ಥೆಯನ್ನು ಕಾಣಲಾಗಿ ಅದನ್ನು ಸಮಪಡಿಸಲೋಸುಗ ಶಿವನಿಂದ ನಿಯುಕ್ತನಾದ ನಾರದನು ಎಲ್ಲಾ ಲೋಕಗಳಲ್ಲಿ ಸಂಚರಿಸಿ ಅಲ್ಲಲ್ಲಿ ಯಾವ ದೊಂದಂಶದ ವೈಷಮ್ಯವನ್ನು ಕಾಣದೇ ಇರುತ್ತಿದ್ದು ಭೂಲೋಕದ ದುಃಸ್ಥಿತಿ ಯನ್ನು ಕಂಡು ಶಿವಾಚಾರ ಶಿವಭಕ್ತಿಗಳ ವಿಹೀನತಿಯೇ ಇದರ ಹೇತುವೆಂದು ಪರಿಭಾವಿಸಿ ಇದನ್ನು ಶಿವನಿಗೆ ಅರುಹಬೇಕೆಂದು ನಿಶ್ಚಯಿಸಿ ಆ ಮಹಾದೇವನ ಸನ್ನಿಧಿಯನ್ನು ಕುರಿತು ತೆರಳಿ ಸಾಷ್ಟಾಂಗಪ್ರಣಿಪಾತದಿಂ ಮಹೇಶನ ಆಶೀರ್ವಾದ ವನ್ನು ಪಡೆದು ಶ್ರೀ ಸಾಂಬಶಿವನಿಗೆ ಭೂಲೋಕದ ದುರವಸ್ಥೆಯನ್ನು ಅರಿಕೆ ಮಾಡಿಕೊಳ್ಳಲಾಗಿ ಶ್ರೀ ಪರಶಿವನ ಶಿಖಾಚಕ್ರಮಧ್ಯಸ್ಥವಾದ ನಿರಂಜನ ಚರ ಲಿಂಗವೇ ಸಿದ್ಧೇಶ್ವರನೆಂಬ ದ್ವಿತೀಯಾಭಿಧಾನದಿಂದ ಭೂಮಿಗತವರಿಸುವದು. ಆ ಸಿದ್ಧೇಶ್ವರನು ಗೋಸಲದ ಚೆನ್ನಬಸವೇಶನೆಂಬ ಜಂಗಮಪುಂಗವನಿಂದ ಉಪದೇಶ

ವನ್ನು ಪಡೆದು ಏಳುನೂರು ವಿರಕ್ತರೊಡನೆ ಸಂಚರಿಸಿ ನ್ಯೂನತೆಯನ್ನು ಹೊಂದಿದ ಷಟ್‌ಸ್ಥಲಮಾರ್ಗವನ್ನು ಪೂರ್ಣಗೊಳಿಸುವನು. ತೋಟದಲ್ಲಿ ತಪವನ್ನಾಚರಿಸಿದ್ದರಿಂದ ತೋಂಟದಾರ್ಯನೆಂಬ ನಾಮಾಂತರವು ಆತನಿಗೆ ಉಂಟಾಗುವುದೆಂದು ಪ್ರಭುದೇವನ ಭವಿಷ್ಯದವತಾರಸ್ವರೂಪವನ್ನು ಹೇಳಿದನು. ಇದೆಲ್ಲವು ಚೆನ್ನಬಸವ ಪುರಾಣದಲ್ಲಿ ಐದನೇ ಕಾಂಡದ ಹತ್ತನೆಯ ಅಧ್ಯಾಯದಲ್ಲಿ ವಿಸ್ತರಿಸಲ್ಪಟ್ಟಿದೆ.

●

## ಶ್ರೀಜಗದ್ಗುರು ತೋಂಟದ ಸಿದ್ಧಲಿಂಗಾರ್ಯರ್ಾಯ ನಮಃ

## ಕಲಿಕಾಲದಲ್ಲಿ ಪ್ರಭುದೇವನ ದ್ವಿತೀಯಾವತಾರವು

ಪಾಯಾಚ್ಛ್ರೀಮದನಾದಿಭಕ್ತಬಸವಸ್ವಾಂತಾಂಬುಜಾಂತಸ್ಸ್ಫುರ-।
ದ್ಧಂಸೋ ಯೋಗಿಮನೋನಿಶಾಂತವಿಮಲಜ್ಞಾನ ಪ್ರದೀಪೋ ವಿಭುಃ।
ಭಕ್ತಾದಿಸ್ಥಲಷಟ್ಕನಿರ್ಣಯಪಥಂ ಸಂಸ್ಥಾಪಯನ್ ಭೂತಲೇ।
ಸಿದ್ಧೇಶಃ ಕರುಣಾಮಯಃ ಪರತರಃ ಶ್ರೀತೋಂಟದಾರ್ಯಾಹ್ವಯಃ ॥ ೧ ॥

ಶ್ರೀಮತ್‌ಕೈಲಾಸದೊಳ್ ಪರಶಿವನು ಪ್ರಕಾಶಮಾನವಾದ ಪ್ರಣವಪೀಠದಲ್ಲಿ ಸುಖಾಸೀನನಾಗಿ ಉಭಯಪಾರ್ಶ್ವಗಳಲ್ಲಿ ಶೋಭಿಸುವ ರೇಣುಕ, ದಾರುಕರೇ ಮೊದಲಾದ ಪ್ರಮಥರ ಸಮೂಹದಿಂದಲೂ ಸರಸ್ವತ್ಯಾದಿದೇವಾಂಗನಾಸಂಸೇವ್ಯಮಾನಳಾದ ಪಾರ್ವತಿಯಿಂದಲೂ ಬ್ರಹ್ಮ, ವಿಷ್ಣು, ಇಂದ್ರ ಮೊದಲಾದ ಸಕಲ ದೇವತೆಗಳಿಂದಲೂ ಶ್ರುತಿಗಳರಸಿ ಕಾಣದ ಪರಬ್ರಹ್ಮವಿದೇ ಎಂದು ಸ್ತುತಿಸುವ ಚಂಡಕೀರ್ತಿಗಳಿಂದಲೂ ನರ್ತಿಸುವ ನಂದಿಭೃಂಗಿಗಳಿಂದಲೂ ಇಂತು ನಾನಾ ಪ್ರಕಾರಸಂಭ್ರಮದೊಳ್ ಒಡ್ಡೋಲಗಂಗೊಂಡು ಒಪ್ಪುತ್ತಿರಲು, ಆ ಸಮಯದಲ್ಲಿ ಚಂದ್ರಮಂಡಲಕ್ಕೆ ಸಮವಾದ ದೇಹಕಾಂತಿಯಿಂದ ಎಳಲಿಟ್ಟ ಜಡಿಯಿಂದ ಕರತಳದೊಳ್ ವೀಣಾದಂಡದಿಂದ ಒಪ್ಪುವ ನಾರದಮುನಿಯು ತೀವ್ರದಿಂದ ಶಿವ ಸಭೆಗೆ ಬಂದು ಅಭವಂಗೆರಗಿ ನಿಟ್ಟುಸುರುಹಾಕಿ ನಿಂತಿರ್ದನು. ಆಗಳಾ ಪಾರ್ವತಿಯು ನಾರದನ ಮುಖವನ್ನು ನೋಡಿ ನಿಟ್ಟುಸಿರುಹಾಕಿದ ಪರಿಯೇನು ಎಂದು ಶಂಕರನನ್ನು ಕೇಳಲು, ಅಭವನಾಗಳ್ ನಾರದನ ಮುಖವನ್ನು ನೋಡಿ ಮುಗುಳುನಗೆಯಿಂದ ಅರಿಯದವನಂತೆ ಮುನಿವರನೇ ನಿನಗೀಗ ಎಲ್ಲಿಂದ ಬರ ಮಾದುದು ಎನೆ, ನಾರದನು ಸಂತೋಷದಿಂದ ಸಾಷ್ಟಾಂಗವೆರಗಿ, ಕರವ ಮುಗಿದು ನುತಿಸಿ ದೇವ ಸರ್ವಜ್ಞ ಶಿವಯೋಗಿಹೃನ್ನಿಲವಾಸ ಮನ್ಮಥಾರಾತಿ ಕೇಳು, ಸಕಲ ಲೋಕಂಗಳನ್ನು ನೋಳ್ಪೆನೆಂದು ಆಂ ಪೋಗಿ ನೋಡಿ, ಬಳಿಕ ಭೂತಳವ ಪೊಕ್ಕು

ಅಲ್ಲಿರ್ಪ ಮಾನುಷಸಮೂಹವಂ ಕಂಡು ಬೇಸರಗೊಂಡು ತಿರಿಗಿ ಬಂದೆನು. ನೀನು ಕರುಣದಿಂದಲ್ಲಿಗೆ ಪೋಗಿ ಮನುಷ್ಯ ಸಮುದಾಯವನ್ನು ರಕ್ಷಿಸಬೇಕು. ಯಾಕೆಂದರೆ ಆ ಭೂಲೋಕದಲ್ಲಿ ಪಂಚಾಕ್ಷರಿಯ ಮಂತ್ರವನ್ನು ಜಪಿಸತಕ್ಕವರನ್ನು, ಕೊರಳಲ್ಲಿ ರುದ್ರಾಕ್ಷಿಗಳನ್ನು ಧರಿಸತಕ್ಕವರನ್ನು, ಗುರುಲಿಂಗಜಂಗಮವನ್ನು ಶಿವಭಾವನೆಯಿಂದ ಪೂಜಿಸತಕ್ಕವರನ್ನು, ಪಾದೋದಕಪ್ರಸಾದವನ್ನು ಸ್ವೀಕರಿಸತಕ್ಕ ಶಿವಭಕ್ತರನ್ನು ಎಲ್ಲಿಯೂ ಕಾಣಲಿಲ್ಲ. ದುರುಳರೆನಿಸುವ ಜೈನ ಚಾರ್ವಾಕ ಬೌದ್ಧ ವೈಷ್ಣವರೇ ಹೆಚ್ಚಿ ಶಿವಭಕ್ತರನ್ನು ದೂಷಿಪರು. ಎಲ್ಲಾದರೂ ಒಬ್ಬ ಶಿವಭಕ್ತನು ಇದ್ದರೆ ಎಲೆಗಳ ಮರೆಯಲ್ಲಿರತಕ್ಕ ಕಾಯಿಗಳೋಪಾದಿಯಲ್ಲಿರುವರು. ಇದರಿಂದ ಸದಾಚಾರಪದ್ಧತಿಯು ಕೆಟ್ಟುಹೋಗಿ ವಿಮಾರ್ಗಪ್ರವರ್ತನವು ಬಲಿದು ಪ್ರಾಣಿಗಳನ್ನು ಅನೇಕ ವಿಧವಾದ ಸಂಕಟಕ್ಕೆ ಈಡುಮಾಡಿದೆ. ಇದೇ ಮೊದಲು ಅಂದರೆ ಕಲಿಯುಗದ ಪ್ರಥಮಪಾದದ ಆರಂಭದಲ್ಲಿ ಅರುವತ್ತುಮೂರುಪುರಾತನಗಣವರ್ಯರೇ ಮೊದಲಾದ ಬಸವಾದಿ ಶಿವಶರಣರು ಭೂಮಿಯಲ್ಲಿ ಶಿವಭಕ್ತಿಯನ್ನು ವಿಸ್ತರಿಸಿ ವೀರಶೈವಾಚಾರವನ್ನು ಸ್ಥಿರಂಗೊಳಿಸಿ ಲೋಕವನ್ನು ರಕ್ಷಿಸಿ ಅಲ್ಲಿಂದಿಲ್ಲಿಗೈತಂದ ಬಳಿಕ ಭೂಮಿಯೊಳ್ ಸದಾಚಾರವಡಗಿ ಶಿವಭಕ್ತಿಯು ಕೆಟ್ಟಿರುವುದೆಂದು ನಾರದನು ಬಿನ್ನಪಂಗೈಯಲು ಇಂದುಧರನಾಲಿಸಿ ಅಂತಾಗಲೆಂದು ತನ್ನ ಹೃನ್ನಿಲಯದಲ್ಲಿರತಕ್ಕ ಅನಾದಿಭಕ್ತನಾದ ಬಸವೇಶ್ವರನ ಹೃದಯದಲ್ಲಿ ಶೋಭಿಸುವ ಅನಾದಿನಿರಂಜನಜಂಗಮವನ್ನು ಕುರಿತು ನೀನು ಚತುರ್ಯುಗಂಗಳಲ್ಲಿ ನಿರಂಜನ, ನಿರ್ಮಾಯ, ನಿಷ್ಕಲ, ಪ್ರಭುನಾಮಂಗಳಿಂದ ಭೂಮಿಯನ್ನು ಸಲಹಿದಿ. ಈಗ ಕರುಣದಿಂದ ಭೂಮಿಗೆ ಹೋಗಿ ಸಕಲಜನವನ್ನು ರಕ್ಷಿಸುವುದೆಂದು ಅಗಜಾರಮಣನು ಬಿನ್ನಪಂಗೈದನು. ಆ ನಿರಂಜನಜಂಗಮವು ಕರುಣದಿಂದಂಗೀಕರಿಸಿ ಭಕ್ತನ ಹೃದಯದಿಂದ ಪೊರಮಟ್ಟು ಎಂಟು ವರ್ಷದ ಶಿಶುರೂಪವನ್ನು ತಳೆದು ಭೂಮಿಗವತರಿಸಿದನು. ಭೂಮಿಯಲ್ಲಿ ಬಣಜಿಗರಿಂದ ನಿರ್ಮಿತವಾದ ವಾಣಿಜ್ಯಪುರವೆಂಬ ಪಟ್ಟಣದಲ್ಲಿರತಕ್ಕ ದಿವ್ಯಲಿಂಗೇಶನೆಂಬ ಲಿಂಗಮೂರ್ತಿಗೆ ಸಮಯಾಚಾರಕ್ಕೋಸ್ಕರ ಒಂದು ಮಠವನ್ನು ಕಟ್ಟಿಸಿ ಸದ್ಭಕ್ತರಾದ ಬಣಜಿಗರು ಅನಾದಿಗಣೇಶ್ವರನೆಂಬ ಚರಮೂರ್ತಿಯನ್ನು ನೆಲೆಗೊಳಿಸಿ ಪಾದೋದಕಪ್ರಸಾದವ ಸವಿಯುತ್ತಿರ್ಪರು. ಅನಾದಿಗಣನಾಥನಿಂದ ಆದಿಗಣನಾಥ, ಆತನಿಂದ ನಿರ್ಮಾಯಗಣವರ, ಆತನಿಂದ ಸ್ವಯಂಜ್ಯೋತಿರೂಪ, ಆತನಿಂದ ನಿರಂಜನಗಣನಾಥ, ಆತನಿಂದ ಜ್ಞಾನಾನಂದರು, ಆತನಿಂದ ಆತ್ಮಗಣನಾಥ, ಆತನಿಂದ ಅಧ್ಯಾತ್ಮಗಣನಾಥ, ಆತನಿಂದ ರುದ್ರದೇವರು, ಆತನಿಂದ ಬಸವಪ್ರಭುವೆಂಬ ಗಣವರ, ಆತನಿಂದ ಆದಿಲಿಂಗೇಶನು, ಆತನಿಂದ ಚೆನ್ನವೀರೇಶ್ವರನು, ಆತನಿಂದ ಗೋಸಲಯತೀಶ್ವರನು, ಆತನಿಂದ ಶಂಕರೇಶ್ವರನು, ಆತನಿಂದ ದಿವ್ಯಲಿಂಗೇಶನು, ಆತನ ಕರಕಮಲದಲ್ಲಿ ತೇಜೋಮೂರ್ತಿಯಾಗಿ ಶ್ರೀಗುರುಚೆನ್ನ

ಬಸವಚರಮೂರ್ತಿಯು ಉದಯಿಸಿದನು. ಶಿಶುರೂಪದಿಂದ ಭೂಮಿಗವತರಿಸಿದ ನಿರಂಜನಜಂಗಮವು ಭೂಮಿಯ ಕ್ರಿಯಾಮಾರ್ಗಕ್ಕನುಸರಿಸಿ ವಾಣಿಜ್ಯಪುರದ ದಿವ್ಯಲಿಂಗಕ್ಕೆ ಕ್ರಿಯಾಮೂರ್ತಿಯಾದ ಶಿವಾನುಭವಚರವರ್ಯರಾದ ಚೆನ್ನಬಸವ ಸ್ವಾಮಿಗಳ ಸನ್ನಿಧಿಗೆ ಬಂದು ಸಾಷ್ಟಾಂಗವೆರಗಿ ಆ ಗುರುವರ್ಯರಿಂದ ಷಟ್‌ಸ್ಥಲ ದೀಕ್ಷೆಯನ್ನು ಕೈಕೊಂಡು ಸಿದ್ಧೇಶ್ವರನೆಂಬ ನಾಮವನ್ನು ಹೊಂದಿ ಷಟ್‌ಸ್ಥಲ ಬ್ರಹ್ಮೋಪದೇಶವನ್ನು ಪಡಕೊಂಡು ಗುರುವಿನ ಆಜ್ಞೆಯ ಮೇರೆಗೆ ಭೂಮಿಯನ್ನು ಸಲಹಬೇಕೆಂದು ಏಳುನೂರು ವಿರಕ್ತರೊಡನೆ ಗಮಿಸಿ ಶ್ರೀಶೈಲ, ಗೋಕರ್ಣ, ಕಾಶಿ ಮೊದಲಾದ ಶಿವಕ್ಷೇತ್ರಗಳಿಂದ ಕೂಡಿದ ನಾನಾದೇಶಂಗಳನ್ನು ಸಂಚರಿಸಿ ಅಲ್ಲಲ್ಲಿ ಮಹಿಮೆಗಳನ್ನುಂಟುಮಾಡಿ ಜೈನ ಚಾರ್ವಾಕ ಬೌದ್ಧ ವೈಷ್ಣವರೇ ಮೊದಲಾದ ದುರುಳರ ಮತಗಳನ್ನು ವೇದಾಗಮಪುರಾಣಗಳಿಂದಲೂ ಮಹಿಮಾತಿಶಯಂಗಳಿಂದಲೂ ವಾದದಲ್ಲಿ ಜಯಿಸಿ ಶಿವಭಕ್ತಿಯನ್ನುಂಟುಮಾಡಿ ಷಟ್‌ಸ್ಥಲಬ್ರಹ್ಮೋಪದೇಶವನ್ನು ಮಾಡಿ ಜಗತ್ತೆಲ್ಲಾ ಷಟ್‌ಸ್ಥಲಬ್ರಹ್ಮಿಗಳು ತುಂಬುವಂತೆ ಷಟ್‌ಸ್ಥಲಾಚಾರವನ್ನು ಸ್ಥಾಪಿಸಿ ಕಗ್ಗೇರಿಯೆಂಬ ಗ್ರಾಮಕ್ಕೆ ಬಂದು ನಿಂಬೆಣ್ಣನೆಂಬ ಸೆಟ್ಟಿಯ ತೋಟದಲ್ಲಿ ಶಿವಧ್ಯಾನಾಸಕ್ತರಾಗಿ ಬಹಿರ್ವಾಸನಾದಿಗಳನ್ನೆಲ್ಲ ಮರೆತು ನಿಬ್ಬೆರಗಿನಿಂದ ಕುಳಿತಿರಲು ಹುತ್ತವಡರಿ ಸರ್ಪಗಳು ಆ ಯತೀಶ್ವರನಿಗೆ ಆಭರಣಗಳಾದವು. ಈ ಪ್ರಕಾರ ಆರು ತಿಂಗಳ ವರೆಗೆ ಆ ಹುತ್ತದಲ್ಲಿ ಇದ್ದು ಮುಂದೆ ಆ ನಿಂಬೆಣ್ಣಸೆಟ್ಟಿಯು ಮಹಾಸ್ವಾಮಿಯವರ ಇರುವಿಕೆಯನ್ನು ಅರಿತವನಾಗಿ ಏಳುನೂರು ಖಂಡುಗದ ಕ್ಷೀರದಿಂದ ಆ ಹುತ್ತವನ್ನು ಕರಗಿಸಿ ಮಹಾಸ್ವಾಮಿಯವರಿಗೆ ಅಭ್ಯಂಜನ ಸ್ನಾನವನ್ನು ಮಾಡಿಸಿ ಘನ ಪರ್ವವನ್ನು ಮಾಡಿದನು. ಮಹಾಸ್ವಾಮಿಯವರ ದರ್ಶನಕ್ಕೆ ಬೋಳಬಸವ, ಉಪ್ಪಿನಹಳ್ಳಿಯಯ್ಯಾ, ಹುಚ್ಚಪರ್ವತೇಂದ್ರ, ದೊಡ್ಡಸಿದ್ಧಲಿಂಗ ಇವರೇ ಮೊದಲಾದ ಮೂರುಸಾವಿರ ಚರಮೂರ್ತಿಗಳು ಬಂದು ಮಹಾಸ್ವಾಮಿಯವರ ಪಾದದಲ್ಲಿ ತಮ್ಮ ತಮ್ಮ ದೇಹವನ್ನೀಡಾಡಿದರು. ಮತ್ತು ತೋಟದಲ್ಲಿ ತಪವನಾಚರಿಸಿದ್ದರಿಂದ ಈತನಿಗೆ ತೋಂಟದಾರ್ಯನೆಂಬ ಉಪನಾಮವು ಪ್ರಸಿದ್ಧವಾಯಿತು ಎಂದು ಸಕಲರು ಕೊಂಡಾಡಿದರು. ಅಲ್ಲಿಂದ ಅನಂತ ದೇಶಂಗಳಲ್ಲಿ ನೂರಾರುವರ್ಷ ಸಂಚರಿಸುತ್ತ ಸತ್ತಂಥ ಮನುಷ್ಯ ಮೊದಲಾದ ಪ್ರಾಣಿವರ್ಗಕ್ಕೆ ಪ್ರಾಣದಾನವನ್ನು ಮಾಡಿ ಎಡೆಯೂರ ಭಕ್ತರ ಭಕ್ತ್ಯಾಧೀನರಾಗಿ ಕೆಲಕಾಲ ನಿಂತು ತದ್‌ಗ್ರಾಮದಲ್ಲೇ ಬೋಳಬಸವೇಶ್ವರಸ್ವಾಮಿಗಳಿಗೆ ಷಟ್‌ಸ್ಥಲ ಬ್ರಹ್ಮೋಪದೇಶವನ್ನು ಕ್ರಮೋಕ್ತವಾಗಿ ಮಾಡಿ ಭೂಮಿಯಲ್ಲಿರತಕ್ಕ ಭಕ್ತ ಮಾಹೇಶ್ವರರೇ ಮೊದಲಾದವರಿಗೆ ಷಟ್‌ಸ್ಥಲಬ್ರಹ್ಮೋಪದೇಶವನ್ನು ಮಾಡಲು ನೀನೇ ಸಮರ್ಥನು ಎಂದು ನಿರವಿಸಿ ಷಟ್‌ಸ್ಥಲಾಚಾರ್ಯಪಟ್ಟವನ್ನು ಕಟ್ಟಿ ಶೂನ್ಯಸಿಂಹಾಸನದೊಳ್ ಕುಳ್ಳಿರಿಸಲು ಮೂರುಸಾವಿರ ಚರಮೂರ್ತಿಗಳು

ಕಾಣಿಕೆಯನ್ನಿಟ್ಟು ಎರಡನೆಯ ಸಿದ್ಧಲಿಂಗನು ಈತನೇ ಎಂದು ಸರ್ವರು ಕೊಂಡಾಡಿ ಸಾಷ್ಟಾಂಗವೆರಗಿದರು. ತೋಂಟದ ಬೋಳಬಸವಸ್ವಾಮಿಗಳ ತೇಜಸ್ಸನ್ನು ತೋಂಟದ ಸಿದ್ಧಲಿಂಗಮಹಾಸ್ವಾಮಿಗಳು ನೋಡಿ ಈತನಿಂದ ಲೋಕದ ಪ್ರಾಣಿಗಳು ನಿಜಮುಕ್ತಿಯನ್ನು ಪಡೆಯುವರೆಂದು ಸಂತೋಷಿಸಿ ಅನಾದಿಭಕ್ತನ ಹೃದಯದಲ್ಲಿ ಬಯಲಾದರು. ಇದಕ್ಕೆ ಸಿದ್ಧೇಶ್ವರ ಪುರಾಣವೇ ಪ್ರಮಾಣವು.



## ಶ್ರೀಜಗದ್ಗುರು ತೋಂಟದ ಬೋಳಬಸವಾಚಾರ್ಯರು ಸಮಃ
## ೨ನೆಯ ಷಟ್‌ಸ್ಥಲಾಚಾರ್ಯಪಟ್ಟವು

ಜ್ಞಾನಾಬ್ಧಿಂ ಗುರುಸಿದ್ಧಲಿಂಗವಿಭುಸದ್ಬೋಧೇಂದುಸಂವರ್ಧಿತಂ ।
ಆಮ್ನಾಯಾಂತಮಹೇಶ್ವರಾಗಮವಚಃಪೀಯೂಷಜನ್ಮಸ್ಥಲಂ ।
ಯೋಗೀಂದ್ರಾಮಲಹೃತ್ಸರೋಜಲಸಿತಂ ಸದ್ಭಕ್ತಿಮುಕ್ತ್ಯೋದಯಂ।
ತಂ ವಂದೇ ಚರವರ್ಯಬೋಳಬಸವಂ ವಿಚ್ಛಿತ್ತಯೇ ಸಂಸೃತೇಃ ॥ ೨ ॥

ಶ್ರೀಜಗದ್ಗುರು ತೋಂಟದ ಸಿದ್ಧಲಿಂಗಮಹಾಸ್ವಾಮಿಗಳವರು ಬೋಳ ಬಸವಾರ್ಯಸ್ವಾಮಿಗಳಿಗೆ ಷಟ್‌ಸ್ಥಲಾಚಾರ್ಯಪಟ್ಟವಂ ಕಟ್ಟಿ ಅನಾದಿಭಕ್ತನ ಹೃದಯದಲ್ಲಿ ಬಯಲಾದ ನಂತರದಲ್ಲಿ ಸಪ್ಪೆಯ ದೇಶಿಕನು, ಪಟ್ಟಣದದೇವ, ಗುರು ಚಂದ್ರಶೇಖರದೇವ, ದೊಡ್ಡಸಿದ್ಧೇಶ್ವರ, ಚಿಟ್ಟಿಗದೇವ, ಶೀಲವಂತೇಶ, ಉಪ್ಪಿನ ಹಳ್ಳಿಯಯ್ಯ ಇವರೇ ಮೊದಲಾದ ಚರಮೂರ್ತಿಗಳು ಈ ಬೋಳಬಸವಾರ್ಯ ಸ್ವಾಮಿಗಳಿಂದ ಭೂಮಿಯಲ್ಲಿ ಷಟ್‌ಸ್ಥಲಸುಮಾರ್ಗವು ಪಸರಿಸುವುದೆಂದು ತಮ್ಮಲ್ಲಿ ತಾವು ಸಂತೋಷಿಸುತ್ತ ಚಿಂತಾರಹಿತರಾಗಿ ಸಕಲಸನ್ಮಾರ್ಗವನ್ನು ಗುರು ಬೋಳಬಸವಾರ್ಯಸ್ವಾಮಿಗಳಿಂದ ತಿಳಿದು ನಿರಂತರದಲ್ಲಿ ಶಿವಜ್ಞಾನ ಯುಕ್ತರಾಗಿ ನಿಜಾನಂದದಿಂದಿರ್ದರು. ಆಗ ಆ ಸಮಯದಲ್ಲಿ ಭೂಮಿಯಲ್ಲಿರ ತಕ್ಕ ಸಮಸ್ತವಿರತರುಗಳು ಅನುರಾಗದಿಂದೆ ಬಂದು ಭೂಮಿಯಲ್ಲಿ ತಮ್ಮ ದೇಹ ವನ್ನೀಡಾಡಿ ತೀವ್ರದಿಂದೆ ತೋಂಟದ ಬೋಳಬಸವಾರ್ಯ ಮಹಾಸ್ವಾಮಿ ಗಳಿಂದ ಷಟ್‌ಸ್ಥಲಸುಮಾರ್ಗವನ್ನು ತಿಳಿದು ಪರಶಿವನ ಅಂತಃಕರಣವನ್ನು ಪಡೆದು ನಿತ್ಯರಾಗಿ ಭಕ್ತಿಜ್ಞಾನವೈರಾಗ್ಯಸಂಪನ್ನರಾಗಿ, ಸತ್ಕೀರ್ತಿಯನ್ನು ಧರಿಸಿ ಭೂಮಿಯಲ್ಲಿ ಸಂಚರಿಸಿದರು. ಆ ಕಾಲದಲ್ಲಿ ಜಗನ್ಮಧ್ಯದಲ್ಲಿ ಎಲ್ಲಿ ನೋಡಿ ದರೂ ಸದ್ಭಕ್ತರ ಸಮೂಹವು, ಮಾಹೇಶ್ವರರ ಸಮೂಹವು, ಶುದ್ಧಸಿದ್ಧಪ್ರಸಿದ್ಧ

ಪ್ರಸಾದಿಗಳ ಸಮೂಹವು, ಪ್ರಾಣಲಿಂಗಿಗಳ ಸಮೂಹವು, ಶರಣರ ಸಮೂಹವು, ಲಿಂಗೈಕ್ಯಸ್ಥಲವುಳ್ಳವರು– ಈ ಪ್ರಕಾರ ಜಗವೆಲ್ಲಾ ತುಂಬಿರುವುದು. ಮತ್ತು ಆರು ಲಿಂಗವನ್ನು ಬಲ್ಲವರು, ಆರು ಹಸ್ತಂಗಳಲ್ಲಿ ಲಿಂಗಂಗಳಾರನ್ನು ನೆಲೆಗೊಳಿಪರು,ಷಡ್ವದನದಿಂಗಿತವನ್ನು ಬಲ್ಲವರು, ಷಡ್ವಿಧಪದಾರ್ಥವನ್ನು ತಿಳಿದವರು, ಷಡ್ವಿಧಭಕ್ತಿಯನ್ನರಿತವರು, ಸಾದಾಖ್ಯಪಂಚಕವನ್ನು ತಿಳಿದವರು, ಆರು ಕಲೆಗಳನ್ನು ಬಲ್ಲವರು, ಷಟ್‌ಪ್ರಸಾದವನ್ನು ತಿಳಿದವರು, ಆಧಾರ, ಸ್ವಾದಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಗ್ನೇಯ ಎಂಬ ಷಡ್ವಿಧಚಕ್ರಂಗಳಲ್ಲಿ ದಳಗಳನ್ನು, ವರ್ಣಗಳನ್ನು, ಅಕ್ಷರಗಳನ್ನು, ಅಧಿದೈವತೆಗಳನ್ನು, ಮಂತ್ರಗಳನ್ನು ಕ್ರಮವಾಗಿ ತಿಳಿದು ಆರುಚಕ್ರಂಗಳಲ್ಲಿ ಆರುಲಿಂಗಗಳನ್ನು ಸ್ಥಾಪನಮಾಡಿ ಕುಶಲತ್ವದಿಂದೆ ಆಚರಿಸುವ ಷಟ್‌ಸ್ಥಲಬ್ರಹ್ಮಿಗಳು ತುಂಬಿರುವರು. ಜಗತ್ತಿನಲ್ಲಿ ಎಲ್ಲಿ ನೋಡಿದರೂ ಷಟ್‌ಸ್ಥಲಬ್ರಹ್ಮಿಗಳ ಕೀರ್ತಿಯೇ ವ್ಯಾಪಿಸಿರುವುದು. ಈ ತೋಂಟದ ಬೋಳಬಸವಮಹಾಸ್ವಾಮಿಗಳವರು ಈ ಪ್ರಕಾರ ಜಗವೆಲ್ಲಾ ಷಟ್‌ಸ್ಥಲಬ್ರಹ್ಮಮಯವಾಗಿ ಮಾಡಿ ಅನಂತ ಮಹತ್ವಗಳನ್ನುಂಟುಮಾಡಿ ವೀರಶೈವಮತ ಗ್ರಂಥಗಳನ್ನು ಬರೆದು ಅಲ್ಲಲ್ಲಿ ಪರಮತಗಳನ್ನು ಖಂಡಿಸಿ ವೀರಶೈವ ಮತವನ್ನು ಸ್ಥಿರಂಗೊಳಿಸಿ ಕೆಲವು ಕಾಲ ಭೂಮಿಯಲ್ಲಿ ಸಂಚರಿಸಿ ಅನಂತರವಲ್ಲಿ ಗೂಳೂರಸಿದ್ಧವೀರೇಶ್ವರಮಹಾಸ್ವಾಮಿಗಳವರಿಗೆ ಷಟ್‌ಸ್ಥಲಬ್ರಹ್ಮೋಪದೇಶವನ್ನು ಮಾಡಿ ಸಿದ್ಧೇಶ್ವರನ ಸಾಂಪ್ರದಾಯ ಪ್ರಕಾರ ಷಟ್‌ಸ್ಥಲಾಚಾರ್ಯಪಟ್ಟಮಂ ಕಟ್ಟಿ ಶೂನ್ಯಸಿಂಹಾಸನದೊಳ್ ಕುಳ್ಳಿರಿಸಿ ಷಟ್‌ಸ್ಥಲವನ್ನು ವಿಸ್ತರಿಸಬೇಕೆಂದಾಜ್ಞಾಪಿಸಿ ತಮ್ಮ ಇಷ್ಟಲಿಂಗದಲ್ಲಿ ಬಯಲಾದರು.



## ಶ್ರೀಜಗದ್ಗುರು ತೋಂಟದ ಸಿದ್ಧವೀರೇಶ್ವರಾಯ ನಮಃ

## ೩ನೆಯ ಷಟ್‌ಸ್ಥಲಾಚಾರ್ಯಪಟ್ಟವು

ದುರ್ವಾದಾಂಬುಧಿಬಾಡಬಂ ಶಿವಮತಾಕೂಪಾರಜೈವಾತೃಕಂ ।
ಖೇಲಂತಂ ಗುರುವರ್ಯಬೋಳಬಸವಾನುಕ್ರೋಶಪದ್ಮಾಕರೇ ।
ಹಂಸಂ ಶ್ರೀಗುರುಸಿದ್ಧಲಿಂಗ ಚರರಾಡ್ವಂಶಾಂಬುಧೌ ಚಂದಿರಂ ।
ಶುದ್ಧಂ ಸದ್ಗುರು ಸಿದ್ಧವೀರಯಮಿನಂ ವಂದೇ ಸದಾ ಮುಕ್ತಿದಂ ॥ ೩ ॥

ಶ್ರೀಜಗದ್ಗುರು ತೋಂಟದ ನಿರಕ್ಷರದ ಬೋಳಬಸವಮಹಾಸ್ವಾಮಿಗಳವರು ಗೂಳೂರಸಿದ್ಧವೀರಸ್ವಾಮಿಗಳವರಿಗೆ ಷಟ್‌ಸ್ಥಲಪಟ್ಟವನ್ನು ಕೊಟ್ಟು

ತಮ್ಮಿಷ್ಟಲಿಂಗದಲ್ಲಿ ಬಯಲಾದನಂತರದಲ್ಲಿ ತೋಂಟದ ಸಿದ್ಧವೀರಮಹಾಸ್ವಾಮಿಗಳವರು ಅನೇಕ ಮಹತ್ವಗಳನ್ನುಂಟುಮಾಡಿ ಭೂಮಿಯಲ್ಲಿರತಕ್ಕ ಪ್ರಾಣಿಗಳನ್ನು ಮುಕ್ತರನ್ನಾಗಿ ಮಾಡಿ ವೀರಶೈವಮತವನ್ನು ಸ್ಥಿರಂಗೊಳಿಸಿ.ಅನೇಕ ಮತಗ್ರಂಥಗಳನ್ನು ಬರೆದು ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ಈ ಷಟ್‌ಸ್ಥಲಗಳ ಆಚರಣೆಗಳನ್ನು ವೀರಶೈವರಿಗೆ ಬೋಧಿಸಿ ಗುರು ಲಿಂಗ ಜಂಗಮ ಪಾದೋದಕ ಪ್ರಸಾದ ವಿಭೂತಿ ರುದ್ರಾಕ್ಷಿ ಮಂತ್ರ ಈ ಬಹಿರಷ್ಟಾವರಣ ಅಂತರಷ್ಟಾವರಣ ಇವುಗಳ ಇರುವಿಕೆಯನ್ನು ಮತ್ತು ಲಿಂಗಸಕೀಲಗಳನ್ನು ತಿಳುಪಿ ಜಗತ್ತಿನಲ್ಲಿ ತತ್ವಮಸ್ಯಾದಿವಾಕ್ಯಾರ್ಥವನ್ನು ವಿಸ್ತರಿಸುವ ಷಟ್‌ಸ್ಥಲಬ್ರಹ್ಮಜ್ಞಾನಿಗಳು ತುಂಬುವಂತೆ ಮಾಡಿದರು. ಆ ಮಹಾಸ್ವಾಮಿಗಳವರು ಕೆಲವು ವರ್ಷಗಳವರೆಗೆ ಭೂಮಿಯಲ್ಲಿ ಸಂಚರಿಸಿ ಉದ್ದಾನಾರ್ಯಮಹಾಸ್ವಾಮಿಗಳಿಗೆ ಷಟ್‌ಸ್ಥಲ ಬ್ರಹ್ಮೋಪದೇಶವನ್ನು ಮಾಡಿ ಭೃಂಗಕೀಟನ್ಯಾಯದಿಂದ ಸ್ವಸ್ವರೂಪಜ್ಞಾನವಾದದ್ದನ್ನು ನೋಡಿ ಪರಮಹರುಷದಿಂದ ಷಟ್‌ಸ್ಥಲಾಚಾರ್ಯಪಟ್ಟವನ್ನು ಕಟ್ಟಿ ಶೂನ್ಯಸಿಂಹಾಸನದೊಳ್ ಕುಳ್ಳಿರಿಸಿ ಷಟ್‌ಸ್ಥಲವನ್ನು ವಿಸ್ತರಿಸಬೇಕೆಂದಾಜ್ಞಾಪಿಸಿ ತಮ್ಮಿಷ್ಟಲಿಂಗದಲ್ಲಿ ಬಯಲಾದರು.



## ಶ್ರೀಜಗದ್ಗುರು ಉದ್ದಾನಾಚಾರ್ಯರ್ಯ ನಮಃ
## ೪ನೆಯ ಷಟ್‌ಸ್ಥಲಾಚಾರ್ಯಪಟ್ಟವು

ಉದ್ದಾನಾರ್ಯಮನಾರ್ಯಗರ್ವಕಮಲಪ್ರೋಚ್ಚಾಟನಾನೇಕಪಂ।
ಪಂಚೇಷುದ್ವಿರದೇಂದ್ರಕುಂಭದಲನಪ್ರೋಚ್ಚಂಡಪಂಚಾನನಂ।
ಗೂಳೂರಸ್ಥಿತ ಸಿದ್ಧವೀರಚರರಾಟ್‌ತತ್ತ್ವೋಪದೇಶೋದಿತ—।
ಜ್ಞಾನಂ ಜ್ಞಾನಮಯಂ ನಮಾಮಿ ಪರಮಾನಂದಾಂಬುಧಿಂ ಸದ್ಗುರುಂ॥ ೪॥

ಶ್ರೀಜಗದ್ಗುರು ತೋಂಟದ ಸಿದ್ಧವೀರಮಹಾಸ್ವಾಮಿಗಳವರು ಉದ್ದಾನಾರ್ಯಸ್ವಾಮಿಗಳಿಗೆ ಷಟ್‌ಸ್ಥಲಾಚಾರ್ಯಪಟ್ಟವನ್ನು ಕಟ್ಟಿ ತಮ್ಮಿಷ್ಟಲಿಂಗದಲ್ಲಿ ಬಯಲಾದ ನಂತರದಲ್ಲಿ ತೋಂಟದ ಉದ್ದಾನಾರ್ಯಮಹಾಸ್ವಾಮಿಗಳವರು ಅನಂತಮಹತ್ವಗಳನ್ನುಂಟುಮಾಡಿ ಕಾಮ, ಕ್ರೋಧ, ಲೋಭ, ಮದ, ಮತ್ಸರ, ಮೋಹಂಗಳೆಂಬ ಅರಿಷಡ್ವರ್ಗಂಗಳನ್ನು ನಿರ್ಮೂಲಮಾಡಿ ಆಣವಮಲ ಮಾಯಾಮಲ ಕಾರ್ಮಿಕಮಲ ಹೀಗೆ ಮೂರು ಮಲಗಳನ್ನು ನಾಶಮಾಡಿ

ಅನಿತ್ಯವಾದ ಶರೀರದ ವಾಸನಾ ಶೂನ್ಯವಾಗಿ ಕೇವಲ ವಸ್ತುವೇ ತಾವಾಗಿ ಜಗತ್ತಿನಲ್ಲಿ ಷಟ್‌ಸ್ಥಲವನ್ನು ಸ್ಥಿರಂಗೊಳಿಸಬೇಕೆಂದು ಇಚ್ಛೆಯಿಂದ ತ್ರಿಣಾಮಲೆಯಲ್ಲಿ ಅರುಣಾಚಲೇಶ್ವರನ ಆಲಯದಲ್ಲಿ ಮೂರ್ತಮಾಡಿದ ಸಮಯದಲ್ಲಿ ಹರಿಹರದೇವನೇ ಮೊದಲಾದ ಮೂರುಸಾವಿರವಿರಕ್ತರು ಮತ್ತು ಭಕ್ತಮಾಹೇಶ್ವರರು ನಮಗೆ ವೀರಶೈವಮಾರ್ಗವನ್ನು ಬೋಧಿಸಬೇಕೆಂದು ಮಹಾಸ್ವಾಮಿಗಳವರಿಗೆ ಬಿನ್ನಹವನ್ನು ಮಾಡಿಕೊಂಡದ್ದರಿಂದ ಮಹಾಸ್ವಾಮಿಗಳವರು ಕರುಣದಿಂದ ಬೋಧಿಸಲುಪಕ್ರಮಿಸಿದರು.

ಎಲೈ ಷಟ್‌ಸ್ಥಲಬ್ರಹ್ಮಿಗಳೇ ಕೇಳಿರಿ! ಬುದ್ಧ, ಕ್ಷಪಣ, ಚಾರ್ವಾಕರ ದುಷ್ಟವಾದ ವೇದಬಾಹ್ಯಮತದಿಂದಲೂ ನ್ಯಾಯ, ಮೀಮಾಂಸ, ಭಾಟ್ಟ, ವೈಷ್ಣವ, ಪಾಶುಪತ, ಪಾಂಚರಾತ್ರ, ವೈಶೇಷಿಕ, ಕಾಪಾಲಿಕ,ಪ್ರಾಭಾಕರ, ಕೌಳ, ಸಾಂಖ್ಯ, ಗಾಣಾಪತ್ಯ ಇವೇ ಮೊದಲಾದ ಮತಗಳಿಗಿಂತಲೂ ಅಧಿಕವಾಗಿ ವೀರಶೈವಮಾರ್ಗವು ಶೋಭಿಸುವದು. ಆದರೆ ಮೂರು ಜನ್ಮಕ್ಕೆ ಶೈವನಿಗೆ ಮುಕ್ತಿ, ಅಧಿಕನಾದಂಥ ವೀರಶೈವನಿಗೆ ವಿಚಾರಮಾಡಿ ನೋಡುತಿರಲಿಕ್ಕೆ ಸುಲಭದಿಂದ ಒಂದೇ ಜನ್ಮಕ್ಕೆ ಮುಕ್ತಿಯಾಗುವದು. ಆ ವೀರಶೈವಮಾರ್ಗದಲ್ಲಿ ಅಧಿಕನೆಂದೆನಿಸಿ ವೀರಶೈವಮಾರ್ಗವನ್ನು ತಿಳಿದು ಆಚರಿಸುವಾತನೇ ಭಕ್ತನು. ಆತನೇ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯನು, ಎಂದು ಹೇಳಿಸಿಕೊಂಡು ಮಹಾಲಿಂಗ ಸ್ವರೂಪನಾಗಿರುವನು ಕೇಳು; ಮುಂದೆ ಷಟ್‌ಸ್ಥಲಮಾರ್ಗವನ್ನು ವಿಸ್ತರಿಸಿ ಹೇಳುವೆವು. ಆದಿಯಲ್ಲಿ ನಿಷ್ಕಲಪರಬ್ರಹ್ಮದ ನೆನಹ ಮಾತ್ರದಿಂದ ತನ್ನ ಶಕ್ತಿಯಿಂದೇ ಚಲನದೋರಿ ಅಧಿಕವಾದಂಥ ಮಹಾಲಿಂಗಸ್ಥಲವನ್ನು ಹೊಂದಿ ಪ್ರಕಾಶಮಾನವಾಗಿ ಒಪ್ಪಿರಲು ಆ ಮಹಾಲಿಂಗವೇ ಮೂರು ತೆರನಾಗಲು ಅಂಗಗಳು ಮೂರಾದವು. ಬಳಿಕ ಅಂಗವಾರಾಗಲು ಲಿಂಗಗಳಾರಾದವು. ಅಂಗವೇ ಜೀವ, ಲಿಂಗವೇ ಪರಶಿವನು. ಈ ಪ್ರಕಾರ ಜೀವತ್ವವನ್ನು ಹೊಂದಿದ ಅಂಗರೂಪವಾದ ಅಶುದ್ಧಚೈತನ್ಯವೇ ಹಲವು ಪ್ರಕಾರವಾಗಿ ಸಕಲ ಸುಖ ದುಃಖಗಳಿಗೆ ಮೈಗೊಟ್ಟು ಲೋಕಪ್ರಪಂಚದಲ್ಲಿರುತಿರ್ಪುದು. ಈ ಪ್ರಕಾರ ಮಾಯಾಪ್ರಪಂಚದಲ್ಲಿ ಹಲವು ರೂಪವನ್ನು ಹೊಂದಿದಂಥ ಜೀವನು ಕೋಟ್ಯಂತರ ಜನ್ಮಗಳನ್ನು ಎತ್ತಿ ಸುಕೃತವನ್ನು ಹೊಂದಿ ಕೆಲವುದಿವಸ ಕಳೆದು ನಿಂತದ್ದೇ ಕಡೆಯಣ ದೇಹವು. ಅಂಥ ದೇಹವೇ ಚರಮದೇಹವೆನಿಸುವದು. ಆ ಚರಮ ದೇಹದಲ್ಲಿ ಇರುವಾತನೇ ಪಿಂಡಸ್ಥಲಾಖ್ಯನು.

ಎಂದು ಈ ಪ್ರಕಾರ ಅಂಗಸ್ಥಲ ನಾಲ್ವತ್ತುನಾಲ್ಕು ಲಿಂಗಸ್ಥಲ ಐವತ್ತೇಳು ಅಂತು ನೂರೊಂದು ಸ್ಥಲಗಳನ್ನು ಬೋಧಿಸಿ ಜಗವೆಲ್ಲಾ ಷಟ್‌ಸ್ಥಲಬ್ರಹ್ಮಜ್ಞಾನಿ

ಗಳು ತುಂಬುವಂತೆ ಮಾಡಿ, ಕೆಲವು ಮತಗ್ರಂಥಗಳನ್ನು ಬರೆದು ಪರಮತಗಳನ್ನು ಖಂಡಿಸಿ ವೀರಶೈವಮತವನ್ನು ಸ್ಥಿರಂಗೊಳಿಸಿ ಕೆಲವು ವರುಷದ ವರೆಗೆ ಭೂಮಿಯಲ್ಲಿ ಸಂಚರಿಸಿ ಹರಿಹರಸ್ವಾಮಿಗಳಿಗೆ ಷಟ್‌ಸ್ಥಲಬ್ರಹ್ಮೋಪದೇಶವನ್ನು ಮಾಡಿ ಷಟ್‌ಸ್ಥಲಾಚಾರ್ಯಪಟ್ಟವನ್ನು ಕಟ್ಟಿ ಶೂನ್ಯಸಿಂಹಾಸನದೊಳ್ ಕುಳ್ಳಿರಿಸಿ ಷಟ್‌ಸ್ಥಲವನ್ನು ವಿಸ್ತರಿಸಬೇಕೆಂದಾಜ್ಞಾಪಿಸಿ ಅದೃಶ್ಯತ್ವವನ್ನೈದಿದರು.

## ಶ್ರೀಜಗದ್ಗುರು ತೋಂಟದ ಹರಿಹರಸ್ವಾಮಿಭ್ಯೋ ನಮಃ

## ೫ನೆಯ ಷಟ್‌ಸ್ಥಲಾಚಾರ್ಯಪಟ್ಟವು

ಹರಿಹರ ಚರವರ್ಯಂ ದುರ್ಮತಧ್ವಾಂತಸೂರ್ಯಂ ।
ಶಿವಮತವನಚೈತ್ರಂ ಷಟ್‌ಸ್ಥಲಾರ್ಥಾಬ್ಜಮಿತ್ರಂ ।
ಯತಿತತಿವಿನುತೋದ್ದಾನಾರ್ಯತತ್ತ್ವೋಪದೇಶಾಂ ।
ಬುಜಮಧುಕರಮೀಡೇ ಭಕ್ತಿಸಂಪತ್ಸಮೃದ್ಧ್ಯೈ ॥೫॥

ಶ್ರೀಜಗದ್ಗುರು ತೋಂಟದ ಉದ್ದಾನಾರ್ಯಮಹಾಸ್ವಾಮಿಗಳವರು ಹರಿಹರಸ್ವಾಮಿಗಳಿಗೆ ಷಟ್‌ಸ್ಥಲಾಚಾರ್ಯಪಟ್ಟವನ್ನು ಕಟ್ಟಿ ಅದೃಶ್ಯತ್ವವನ್ನು ಹೊಂದಿದ ನಂತರದಲ್ಲಿ ತೋಂಟದ ಹರಿಹರಮಹಾಸ್ವಾಮಿಗಳವರು ಅನೇಕ ಮಹತ್ವಗಳನ್ನುಂಟುಮಾಡಿ ದುರುಳವಾದ ಮತಗಳನ್ನು ಖಂಡಿಸಿ ವೀರಶೈವಮತವನ್ನು ಸ್ಥಿರಂಗೊಳಿಸಿ ತ್ರಿಸಹಸ್ರವಿರಕ್ತಮೂರ್ತಿಗಳಿಗೆ ಷಟ್‌ಸ್ಥಲಬ್ರಹ್ಮೋಪದೇಶವನ್ನು ಮಾಡಿ ಅಷ್ಟಾಂಗಯೋಗಲಕ್ಷಣವನ್ನು ತಿಳಿಸಿ ಜಗತ್ತಿಗೆ ಮೋಕ್ಷಗುರುವೆನಿಸಿ ಹಿರೇಹಡಗಲಿಯೆಂಬ ಗ್ರಾಮದ ಅರಣ್ಯದಲ್ಲಿ ಕೆಲವು ವರುಷಗಳವರೆಗೆ ಯೋಗಸಮಾಧಿಯಲ್ಲಿರ್ದು ಅನಂತರದಲ್ಲಿ ಬಹಿರ್ವಾಸನಾದಿಗಳನ್ನರಿತು ಭೂಮಿಯನ್ನೆಲ್ಲ ಸಂಚರಿಸಿ ಅಂತ್ಯದಲ್ಲಿ ಛಿಕ್ಕಾಕದ ಬಸವಲಿಂಗಸ್ವಾಮಿಗಳಿಗೆ ಷಟ್‌ಸ್ಥಲಬ್ರಹ್ಮೋಪದೇಶವನ್ನು ಮಾಡಿ ಈತನಿಂದಲೇ ಜಗತ್ತಿನ ಪ್ರಾಣಿಗಳು ಬ್ರಹ್ಮಜ್ಞಾನವನ್ನು ಪಡೆದು ಮೋಕ್ಷವನ್ನು ಹೊಂದುವರೆಂದು ಅರಿತವರಾಗಿ ಆ ಬಸವಲಿಂಗಸ್ವಾಮಿಗಳಿಗೆ ಷಟ್‌ಸ್ಥಲಾಚಾರ್ಯಪಟ್ಟವನ್ನು ಕಟ್ಟಿ ಶೂನ್ಯಸಿಂಹಾಸನದಲ್ಲಿ ಕುಳ್ಳಿರಿಸಿ ಷಟ್‌ಸ್ಥಲವನ್ನು ವಿಸ್ತರಿಸಬೇಕೆಂದಾಜ್ಞಾಪಿಸಿ ಶಿವಯೋಗಸಮಾಧಿಯನ್ನೈದಿದರು.

## ಶ್ರೀಜಗದ್ಗುರು ತೋಂಟದ ಭಿಕ್ಷುಕದ ಬಸವಲಿಂಗಾರ್ಯರ್ಾಯ ನಮಃ
## ೬ನೆಯ ಷಟ್‌ಸ್ಥಲಾಚಾರ್ಯಪಟ್ಟವು

ಹರಿಹರೇಶಕರಾಬ್ಜಸಮುದ್ಭವಂ ।
ಕರಣವಾರನಗೌಘಪರಶ್ವಧಂ ।
ಬಸವಲಿಂಗಮುಸಂಗಮುನಾಮುಯಂ ।
ಹೃದಿ ಭಜಾಮಿ ನಿರಂಜನಜಂಗಮಂ ||೬||

ಶ್ರೀಜಗದ್ಗುರು ತೋಂಟದ ಹರಿಹರಾಚಾರ್ಯಮಹಾಸ್ವಾಮಿಗಳು ಭಿಕ್ಷುಕದ ಬಸವಲಿಂಗಾರ್ಯಸ್ವಾಮಿಗಳಿಗೆ ಷಟ್‌ಸ್ಥಲಾಚಾರ್ಯಪಟ್ಟವಂ ಕೊಟ್ಟು ಯೋಗಸಮಾಧಿಯನ್ನು ಹೊಂದಿದ ನಂತರದಲ್ಲಿ ತೋಂಟದ ಬಸವಲಿಂಗಾರ್ಯಸ್ವಾಮಿಗಳು ಅನೇಕ ಮಹತ್ವಾತಿಶಯಗಳಿಂದ ದೇಶದಲ್ಲೆಲ್ಲಾ ಸಂಚರಿಸಿ ಅನೇಕ ವಿರಕ್ತಮೂರ್ತಿಗಳಿಗೆ ಷಟ್‌ಸ್ಥಲಬ್ರಹ್ಮೋಪದೇಶವನ್ನು ಮಾಡಿ ವೀರಶೈವಮತವನ್ನು ಸ್ಥಿರಂಗೊಳಿಸಿ ಕೆಲವು ಮತಗ್ರಂಥಗಳನ್ನು ಬರೆದು ಅನ್ಯಮತಗಳನ್ನು ಖಂಡಿಸಿ ಕೆಲವು ವರುಷದ ವರಗೆ ಭೂಮಿಯಲ್ಲಿದ್ದು ಕಡೆಗೆ ಕಟಗಿಹಳ್ಳಿ ರಾಚೋಟಿಸ್ವಾಮಿಗಳಿಗೆ ಶಿವಾನುಭವಶಾಸ್ತ್ರವನ್ನು ಸಂಪಾದನಂಗೈದು ನೂರೊಂದುಸ್ಥಲಕಟ್ಟಿನ ವಿವರವನ್ನು ಚೆನ್ನಾಗಿ ತಿಳುಪಿ ಅಂಗಲಿಂಗಸಮರಸಭಾವವನ್ನುಂಟುಮಾಡಿ ಕೇವಲಬ್ರಹ್ಮಸ್ವರೂಪಿಗಳಾದದ್ದನ್ನು ನೋಡಿ ಹರುಷಚಿತ್ತವುಳ್ಳವರಾಗಿ ಆ ಕಟಗಿಹಳ್ಳಿಯ ರಾಚೋಟಿಸ್ವಾಮಿಗಳಿಗೆ ಷಟ್‌ಸ್ಥಲಾಚಾರ್ಯಪಟ್ಟವನ್ನು ಕೊಟ್ಟು ಶೂನ್ಯಸಿಂಹಾಸನದಲ್ಲಿ ಕುಳ್ಳಿರಿಸಲು ಶಿವಾನುಭವವುಳ್ಳ ವಿರಕ್ತರು ಈತನೇ ಸಿದ್ಧೇಶ್ವರನು ಅಹುದು ಎಂದು ಕೊಂಡಾಡಿ ಸಾಷ್ಟಾಂಗವೆರಗಿದರು. ತೋಂಟದ ರಾಚೋಟಿಸ್ವಾಮಿಗಳ ಮಹಿಮೆಯನ್ನು ತೋಂಟದ ಬಸಲಿಂಗಸ್ವಾಮಿಗಳು ನೋಡಿ ಈತನಿಂದಲೇ ಜಗತ್ತಿನ ಪ್ರಾಣಿಗಳು ಮುಕ್ತಿಯನ್ನು ಪಡೆಯುವರೆಂದು ಹರ್ಷವುಳ್ಳವರಾಗಿ ಷಟ್‌ಸ್ಥಲವನ್ನು ವಿಸ್ತರಿಸಬೇಕೆಂದಾಜ್ಞಾಪಿಸಿ ಪಂಚತತ್ತ್ವದಿಂದ ಯುಕ್ತವಾದ ಶರೀರವನ್ನು ಆಯಾಯತತ್ತ್ವಕ್ಕೆ ಹೊಂದಿಸಿ ಆತ್ಮಸ್ವರೂಪವನ್ನು ಹೊಂದಿದರು.

## ಶ್ರೀಜಗದ್ಗುರು ರಾಚೋಟಿಸ್ವಾಮಿಭ್ಯೋ ನಮಃ

## ೭ನೆಯ ಷಟ್‌ಸ್ಥಲಾಚಾರ್ಯಪಟ್ಟವು

ರಾಚೋಟೀಶಚರೇಶ್ವರಂ ಬಸವಲಿಂಗೇಶಾನುಕಂಪಾಸುಧಾ- ।
ಕೂಪಾರೋದ್ಭವಮೀಶಭಕ್ತವಿತತೇಶ್ಚಿಂತಾಮಣಿಂ ಭಾಸುರಂ ।
ಕಾಸಾರಂ ನಿಜಮಾನಸಾಲಿಕಲಿತಾಮ್ನಾಯಾಗಮಾಬ್ಜಾಂಚಿತಂ ।
ಲಿಂಗಾಂಗಸ್ಥಲತತ್ತ್ವಬೋಧವಿಬುಧದೃಕ್‌ಸ್ವರ್ಗಮೀಡೇಽನ್ವಹಂ || ೭ ||

ಶ್ರೀಜಗದ್ಗುರು ತೋಂಟದ ಬಸವಲಿಂಗಮಹಾಸ್ವಾಮಿಗಳು ರಾಚೋಟಿ ಸ್ವಾಮಿಗಳಿಗೆ ಷಟ್‌ಸ್ಥಲದ ಪಟ್ಟವನ್ನು ಕಟ್ಟಿ ಆತ್ಮಸ್ವರೂಪವನ್ನು ಹೊಂದಿದ ನಂತರದಲ್ಲಿ ತೋಂಟದ ರಾಚೋಟಿಸ್ವಾಮಿಗಳು ಅನೇಕದೇಶಂಗಳನ್ನು ಸಂಚರಿಸಿ ಅಲ್ಲಲ್ಲಿ ಅನೇಕ ಮಹತ್ವಗಳನ್ನುಂಟುಮಾಡಿ ಪರಮತಗಳನ್ನು ಜಯಿಸಿ ವೀರಶೈವಮತದ ಉತ್ಕರ್ಷವನ್ನು ಹಬ್ಬಿಸಿ ರಾಜಾಧಿರಾಜರಿಂದ ಜಾಹಗೀರವನ್ನು ಪಡೆದರು. ಈ ಮಹಾಸ್ವಾಮಿಗಳವರ ಸಂಬಂಧಿಸ ಸನದು ಸೂತ್ರಗಳು ಈಗ ಹಾಲಿ ಸಂಸ್ಥಾನದಲ್ಲಿ ಇದ್ದಾವೆ. ಆದರೆ ಈ ಮಹಾಸ್ವಾಮಿಗಳು ಜಗತ್ತಿನಲ್ಲಿ ಷಟ್‌ಸ್ಥಲಬ್ರಹ್ಮಜ್ಞಾನಿಗಳೇ ತುಂಬುವಂತೆ ಮಾಡಿ ಅಕಸ್ಮಾತ್ ಮಲೆನಾಡಸೀಮೆಗೆ ಸೇರಿದ್ದ ಕೂಡ್ಲಿಯೆಂಬ ಗ್ರಾಮಕ್ಕೆ ದಯಮಾಡಿಸಿದಾಗ್ಗೆ ಅಲ್ಲಿಯ ಹಿರೇಮಠದಲ್ಲಿ ಒಂದಾನೊಂದು ದಿವ್ಯತೇಜೋಭರಿತವಾದ ಎಂಟುವರುಷದ ಶಿಶುವು ಚಿಕ್ಕತನದಲ್ಲಿ ತಾಯಿಯ ಸ್ತನ್ಯಪಾನವಿಲ್ಲದೆಯೂ ವಯೋವೃದ್ಧಿಯಲ್ಲಿ ಅನ್ನೋದಕಗಳ ಮ್ಯಾಲಿನ ಆಶೆ ಇಲ್ಲದೆಯೂ ಬಾಹ್ಯವ್ಯಾಪಾರಗಳನ್ನು ಮರೆತು ನಿಜಾನಂದದೊಳ್ಮೆರೆಯುತ್ತಿದ್ದದ್ದನ್ನು ತಿಳಿದು ಆ ದಿವ್ಯಶಿಶುವು ತಮ್ಮ ವಸ್ತುವೇ ಎಂದು ದೃಢವಾಗಿ ನಿಶ್ಚೈಸಿ ಆ ತೇಜೋಮೂರ್ತಿಯನ್ನು ಕೊಡುವುದಾಗಿ ಮಾತಾಪಿತೃಗಳನ್ನು ಕೇಳಿದರು. ಆಗಲಾ ಮಠದವರು ಈ ಶಿಶುವು ಹುಟ್ಟಿದಾಗಲೇ ಪರಮವಿರಕ್ತಿಯಿಂದೆ ಪರತತ್ತ್ವದಲ್ಲಿ ಮನಸ್ಸನ್ನು ನಿಯೋಜಿಸಿ ಶೋಭಿಸುತ್ತಿದ್ದುದರಿಂದ ತಮ್ಮಂಥ ಶಿವಯೋಗಿಗಳ ಜೇಡಿದಲ್ಲಿ ಅರ್ಪಿಸಬೇಕೆಂದು ಬಹುದಿವಸಗಳಿಂದ ನಿರೀಕ್ಷಿಸುತ್ತಿದ್ದ ನಮ್ಮ ಸಂಕಲ್ಪವು ಈ ದಿವಸ ಫಲಿಸಿತು ಎಂದು ಹೇಳಿ ಭಕ್ತಿಪುರಸ್ಸರವಾಗಿ ಆ ಶಿಶುವನ್ನು ಮಹಾಸ್ವಾಮಿಗಳಿಗೆ ಒಪ್ಪಿಸಿದರು. ಬಹುದಿವಸಗಳ ಪೂರ್ವಸಾಂಸಾರಿಕವಾಸನಾವಿದೂರತೆಯಿಂದ ತತ್ತ್ವಜ್ಞಾನವು ಬಲಿದು ಶುದ್ಧಾಂತಃಕರಣವಾದ ಆ ಶಿಶುವಿನಲ್ಲಿ 'ತಪ್ತೇನ ತಸ್ತಮಯಸಾ ಘಟನಾಯ ಯೋಗ್ಯಂ' ಎಂಬ ನ್ಯಾಯದಿಂದೆ ಶ್ರೀಗುರುಕೃತವಾದ ಷಟ್‌ಸ್ಥಲತತ್ತ್ವೋಪದೇಶವು ಕೂಡಲೇ ಫಲಿಸಲಾಗಿ ಆ ಶಿಶುವು 'ಭೃಂಗಕೀಟ' ನ್ಯಾಯದಿಂದ ಗುರುಸ್ವರೂಪವನ್ನು ಹೊಂದಿತು. ಆಗಲಿ ಷಟ್‌ಸ್ಥಲತತ್ತ್ವವನ್ನು ಬೋಧಿಸುವ ಅಧಿಕಾರವನ್ನು ಆ ಪರಮತೇಜೋಮೂರ್ತಿಗೆ ಅನುಗ್ರಹಿಸಿ ಶೂನ್ಯಪೀಠದಲ್ಲಿ ಕುಳ್ಳಿರಿಸಿ ಮಹಾಂತಸ್ವಾಮಿಯೆಂಬ ಅಭಿಧಾನ

ದಿಂದ ಆ ಜ್ಯೋತಿರ್ಮಯಮೂರ್ತಿಯನ್ನು ಕರೆದರು. ಅಲ್ಲಿಂದ ಆ ಮಹಾಂತ ಸ್ವಾಮಿಗಳೊಡನೆ ಕೃತಪುರಿಗೆ ದಯಮಾಡಿಸಿ ಮಾನ್ವಿಮಠವೆಂಬ ನಿಜವಾಸದಲ್ಲಿ ಲಿಂಗಾನಂದವೈಭವದೊಡನೆ ಸದ್ಭಕ್ತನಾದ ಮಾನ್ವಿ ಅನ್ನದಾನಪ್ಪನೆಂಬ ಭಕ್ತೋತ್ತಮನ ಭಕ್ತಿಯಲ್ಲಿ ಕೆಲವುಕಾಲದ ವರೆಗೂ ವಾಸಿಸಿ ಕರಿಬಸವದೇವರೆಂಬ ಶಿವಾನುಭವಚರಮೂರ್ತಿಗಳನ್ನು ಗದುಗಿನಲ್ಲಿ ಇರುವುದಾಗಿ ಆಜ್ಞಾಪಿಸಿ ಉಭಯ ಸ್ವಾಮಿಗಳು ತಿಳವಳ್ಳಿಯೆಂಬ ಗ್ರಾಮದ ಭಕ್ತರ ಭಕ್ತ್ಯಧೀನರಾಗಿ ಕೆಲವುಕಾಲ ವಾಸಿಸಿ ಅಂತ್ಯದಲ್ಲಿ ಮಹಾಸ್ವಾಮಿಗಳವರು ತೋಂಟದ ಕೌದೀಮಹಾಂತಸ್ವಾಮಿಗಳಿಗೆ ಆಜ್ಞಾಪಿಸಿದ್ದೇನೆಂದರೆ ಜಗತ್ತಿನಲ್ಲಿ ಷಟ್‌ಸ್ಥಲವನ್ನು ವಿಸ್ತರಿಸಿ ಪ್ರಾಣಿಗಳನ್ನು ಉದ್ಧರಿಸಬೇಕೆಂದು ನಿರವಿಸಿ ತಮ್ಮ ಇಷ್ಟಲಿಂಗದಲ್ಲಿ ಬಯಲಾದರು.



## ಶ್ರೀಜಗದ್ಗುರು ಕೌದೀಮಹಾಂತಸ್ವಾಮಿಭ್ಯೋ ನಮಃ
## ೮ನೆಯ ಷಟ್‌ಸ್ಥಲಾಚಾರ್ಯಪಟ್ಟವು

ಶಾಂತಂ ಕಾಂತಂ ವಿಭಾಂತಂ ಯಮಿಜನವಿತತೇರಂತರಂಗೇ ಮಹಾಂತಾ-।
ಭಿಖ್ಯಂ ಕಂಥಾಂ ವಸಾನಂ ತ್ರಿಯುಗರಿಪುಮದಾರಣ್ಯದಾವಪ್ರಭಾವಂ ।
ಚಕ್ರೇಷ್ವಾಧಾರಮುಖ್ಯೇಷ್ವವಿರತಮಮಲಂ ಲಿಂಗಮಾಲೋಕಯಂತಂ ।
ರಾಚೋಟೇಶೋಪದೇಶಾಮೃತಶರಧಿಭವಂ ಪೂರ್ಣಚಂದ್ರಂ ನಮಾಮಿ ॥೮॥

ಶ್ರೀಜಗದ್ಗುರು ತೋಂಟದ ರಾಚೋಟಿಸ್ವಾಮಿಗಳು ಕೌದೀಮಹಾಂತ ಸ್ವಾಮಿಗಳಿಗೆ ಷಟ್‌ಸ್ಥಲದ ಪಟ್ಟವನ್ನು ಕಟ್ಟಿ ತಮ್ಮಿಷ್ಟಲಿಂಗದಲ್ಲಿ ಬಯಲಾದ ನಂತರದಲ್ಲಿ ಕರುಣಾಸಮುದ್ರರಾದಂಥ ಸರ್ವಜ್ಞರಾದಂಥ ಸಿದ್ಧೇಶ್ವರನ ಸಂಪ್ರದಾಯ ಪ್ರಸಿದ್ಧಿಯಲ್ಲಿ ಕಟ್ಟಲ್ಪಟ್ಟ ಶ್ರದ್ಧಾವುಳ್ಳಂಥ ಶ್ರೀಸಿದ್ಧೇಶ್ವರ ಯೋಗಿವರ್ಯನ ಮುಖಕಮಲದಿಂದ ಉಪದಿಷ್ಟರಾದಂಥ ಷಟ್‌ಸ್ಥಲತತ್ತ್ವಬೋಧಕರಾದಂಥ ವೀರಮಾಹೇಶ್ವರರನ್ನು ಜ್ಞಾನಸಮುದ್ರದಲ್ಲಿ ಮುಳುಗುವ ಮನಸ್ಸುಳ್ಳವರನ್ನಾಗಿ ಮಾಡಿದಂಥ ಅಧಿಕವಾದ ಭೂಮಿಯನ್ನು ಪಾದನ್ಯಾಸದಿಂದ ಪವಿತ್ರವನ್ನು ಮಾಡಿದಂಥ ತೋಂಟದ ಕೌದೀಮಹಾಂತಸ್ವಾಮಿಗಳು ದಯೆಯೆಂಬ ಕಮಂಡಲು, ಜ್ಞಾನವೆಂಬ ದಂಡ, ಕ್ಷಮಾ ಎಂಬ ಭಸ್ಮಘುಟಿಕಾ, ಸಮತೆಯೆಂಬ ಕಂಥಾ, ವೈರಾಗ್ಯವೆಂಬ ಭಿಕ್ಷಾಪಾತ್ರೆ ಇವೇ ಪಂಚಮುದ್ರೆಗಳನ್ನು ಧಾರಣಮಾಡಿಕೊಂಡು ಭೂಮಿಯಲ್ಲಿ ಸಂಚರಿಸಿದರು. ಈ ಅರ್ಥದಲ್ಲಿ ಪ್ರಮಾಣವು, ವೀರಶೈವಾನಂದಚಂದ್ರಿಕಾ ಕ್ರಿಯಾಖಂಡದಲ್ಲಿ :

ಕಾರುಣ್ಯಾಬ್ಧಿಃ ಸಂಪ್ರದಾಯಪ್ರಸಿದ್ಧೌ ।
ಬದ್ಧಶ್ರದ್ಧಃ ಸಾಧುಸಿದ್ಧೇಶ್ವರಸ್ಯ ।
ಸರ್ವಾಭಿಜ್ಞಃ ಕೋಽಪಿ ಕೌದೀಮಹಾಂತ- ।
ಸ್ವಾಮೀ ಭೂಮಾವಾವಿರಾಸೀದ್ವಿರಾಗೀ ॥ ೧ ॥

ಶ್ರೀಸಿದ್ಧೇಶ್ವರಯೋಗಿವರ್ಯವದನಾಂಭೋಜೋಪದಿಷ್ಟಾಮಲ-।
ಶ್ರೇಯಃ ಷಟ್‌ಸ್ಥಲತತ್ತ್ವಬೋಧನಪರಃ ಶ್ರೀವೀರಮಾಹೇಶ್ವರಾನ್ ।
ಜ್ಞಾನಾಂಭೋನಿಧಿಸನ್ನಿಮಗ್ನಮನಸಃ ಕುರ್ವನ್ನಶೇಷಾಂ ಧರಾಂ ।
ಪಾದನ್ಯಾಸಪವಿತ್ರಿತಾಂ ವಿರಚಯನ್ನಾದ್ಯಸ್ಸ ಚಾದ್ಯೋತತ ॥ ೨ ॥

ಬಿಭ್ರಾಣಸ್ಸದಯಾಕಮಂಡಲಮಪಿ ಜ್ಞಾನಾಖ್ಯದಂಡಂ ಕ್ಷಮಾ ।
ಭಸ್ಮಾಧಾರಸುಭಸ್ತ್ರಿಕಾಂ ಚ ಸಮತಾಭಿಖ್ಯಾಂ ಚ ಕಂಥಾಮಪಿ ।
ವೈರಾಗ್ಯಾಭಿದಭೈಕ್ಷಭಾಜನಮಪಿ ಪ್ರತ್ಯಾಶಮಾಶೂಜ್ಝಿತೋ ।
ಲಿಂಗಾಂಗದ್ವಯಸಾಮರಸ್ಯಕಲನಾನಿಷ್ಠೋ ವರಿಷ್ಠೋಽಚರತ್ ॥ ೩ ॥

ಈ ಪ್ರಕಾರ ಪರಮತೇಜೋರಾಶಿಯಾಗಿ ಮೆರೆಯುತ್ತಿರುವ ಚರಕುಲಪಾವನ
ರಾದ ಮಹಾಂತಯತಿವರರು ಕೌದಿಯು ಕಪನಿ ಶಿರೋವೇಷ್ಟನ ಮುಂತಾದವು
ಗಳನ್ನು ಧರಿಸಿ ಪರಮವಿರತಿಯ ಆನಂದದ ಅನುಭವದಿಂದೆ ಒಪ್ಪುತ್ತಿರ್ದರಾದುದ
ರಿಂದ ಈ ಯತಿಕುಲಚಕ್ರವರ್ತಿಗಳು ಕೌದೀಮಹಾಂತಸ್ವಾಮಿಯೆಂಬ ಜಗ
ದ್ವಿಖ್ಯಾತವಾದ ಹೆಸರನ್ನು ಧರಿಸಿದರು. ಈ ತೋಂಟದ ಕೌದೀಮಹಾಂತಸ್ವಾಮಿ
ಗಳು ಪರಮವಿರತರಾಗಿ ಆಯಾಯ ದೇಶಂಗಳನ್ನು ಸಂಚರಿಸುತ್ತೆ ಮಹಿಮಾತಿ
ರೇಕಂಗಳಿಂದೆ ಜನರ ಅಜ್ಞಾನಾಂಧಕಾರವನ್ನು ನಿವಾರಿಸುತ್ತೆ ಅನ್ನಗಿರಿಯೆಂಬ
ಗ್ರಾಮದಿಂದೆ ಮಲೆನಾಡಿನ ಶಿಕಾರಿಪುರವೆಂಬ ಗ್ರಾಮವನ್ನು ಕುರಿತು ದಯ
ಮಾಡಿಸಿ ಪಂಪಾಸರೋವರವನ್ನು ಕಾಣಬೇಕೆಂದು ಕುತೂಹಲಪಟ್ಟರು. ಬಳಿಕ
ಪಂಪಾಸರೋವರದ ಮಾರ್ಗವನ್ನು ತೋರಿಸುವರಾರೆಂದು ಯೋಚಿಸುತ್ತಿರುವ
ಸಮಯದಲ್ಲಿ ದೇವಗಂಗೆಯು ಎದುರುನಿಂತು, ಆಜ್ಞೆಯನ್ನು ನೆರವೇರಿಸಲು ಸಿದ್ಧ
ಳಾದ ನನಗೆ ಮಾಡತಕ್ಕ ಕೆಲಸವನ್ನು ನಿರೂಪಿಸಬೇಕೆಂದು ಬೇಡಿಕೊಂಡಳು.
ಆಗಲಾ ಮಹಾಸ್ವಾಮಿಗಳು, ಪಂಪಾಪಥವನ್ನು ತೋರಿಸಲಾಜ್ಞಾಪಿಸಲು ಆ
ಗಂಗೆಯು ಚಿಕ್ಕನದಿಯ ರೂಪದಿಂದ ಪ್ರವಹಿಸಲು ಉಪಕ್ರಮಿಸಿದಳು. ಮಹಾ
ಸ್ವಾಮಿಗಳು ಆ ಪ್ರವಾಹವನ್ನೇ ಅನುಸರಿಸುತ್ತೆ ಪಂಪಾಕ್ಷೇತ್ರದ ಅಧಿನಾಥನಾದ
ವಿರೂಪಾಕ್ಷೇಶನ ಸಮೀಪದಲ್ಲಿರುವ ಒಂದಾನೊಂದು ಎತ್ತರವಾದ ಭೂಭಾಗವನ್ನು
ಸೇರಿ ಅಲ್ಲಿಯೇ ಯೋಗಾಸನದಲ್ಲಿ ಕುಳಿತರು. ಈ ವಾರ್ತೆಯು ಪಂಪಾಧಿಪನಾದ
ವಿರೂಪಾಕ್ಷನಿಗೆ ತಿಳಿಯಲಾಗಿ ಕೂಡಲೆ ಗೌರಿಯೊಡನೆ ಮಹಾಸ್ವಾಮಿಗಳ ಸನ್ನಿ
ಧಾನಕ್ಕೆ ಬಂದು ಲಿಂಗಾರ್ಚನೆಯನ್ನು ತೀರಿಸಿಕೊಳ್ಳುವುದಕ್ಕೆ ವಿಜ್ಞಾಪಿಸಲು
ಮಹಾಸ್ವಾಮಿಗಳು ಆ ವಿಜ್ಞಪ್ತಿಯನ್ನಂಗೀಕರಿಸಿ ಅಲ್ಲಿಯೇ ಒಂದು ಮಾಸದ

ಅವಸಾನದ ವರೆಗೂ ಲಿಂಗಾರ್ಚನಾನಂದಪರವಶರಾಗಿದ್ದರು. ಲಿಂಗಾರ್ಚನೆಯು ಸಮಾಪ್ತವಾಗಲು ವಿರೂಪಾಕ್ಷನ ಬಿನ್ನಹದ ಮೇರೆಗೆ ಪಂಪಾಕ್ಷೇತ್ರವನ್ನು ನಿರೀಕ್ಷಿಸಲು ದಯಮಾಡಿಸಿ, ಅಲ್ಲಿ ಕೆಲವು ದಿವಸಗಳ ವರೆಗೆ ವಿರೂಪಾಕ್ಷನ ಭಕ್ತಿ ಪರವಶರಾಗಿ ದರ್ಶನೀಯ ಸ್ಥಾನಗಳನ್ನು ನೋಡುತ್ತ ನಿಜಾನಂದದೊಳ್ ಕಾಲ ವನ್ನು ಕಳೆಯುತ್ತ ಅಲ್ಲಿಂದ ಹೊರಟರು. ಈ ಸ್ವಾಮಿಗಳಿಗೆ ಬಿನ್ನಹವನ್ನು ಮಾಡುವುದಕ್ಕೋಸ್ಕರ ಇವರು ಕುಳಿತಿದ್ದ ಎತ್ತರವಾದ ಪ್ರದೇಶದಲ್ಲಿ ವಿರೂಪಾಕ್ಷ ಲಿಂಗಮೂರ್ತಿಯು ಒಡದು ಮೂಡಿರುವುದರಿಂದ ಅದಕ್ಕೆ ಲಿಂಗನಮರಡಿಯೆಂಬ ನಾಮಧೇಯವು ಈಗಲೂ ರೂಢವಾಗಿದೆ. ಮಹಾಸ್ವಾಮಿಗಳಾದರೂ ಅಲ್ಲಿಂದ ದಯಮಾಡಿಸಿ ಕೆಲವು ದಿವಸಗಳ ವರೆಗೆ ಸಂಚರಿಸುತ್ತೆ ತಮಗೆ ಪಂಪಾಸರೋವರದ ಮಾರ್ಗವನ್ನು ತೋರಿಸುವುದಕ್ಕೆ ಪ್ರವಹಿಸುತ್ತಿದ್ದ ಹಗರಿಯೆಂಬ ಚಿಕ್ಕ ನದಿಯ ದಡದಲ್ಲಿರುವ ಬಾಚೀಗೊಂಡನಹಳ್ಳಿಯೆಂಬ ಗ್ರಾಮದ ಸಮೀಪದಲ್ಲಿ ಫಲಪುಷ್ಪಭಾರದಿಂದ ಶೋಭಿಸುತ್ತಿರುವ ನಾನಾ ವೃಕ್ಷಂಗಳಿಂದಲೂ ನವೀನ ಗಳಾದ ಕುಸುಮಪಲ್ಲವಗಳಿಂದೊಪ್ಪುತ್ತಿರುವ ಲತೆಗಳಿಂದಲೂ ಸೊಬಗುಗೊಂಡಿರುವ ಒಂದಾನೊಂದು ಆರಾಮವನ್ನು ಕಂಡರು. ಈ ವಿಶಾಲವಾದ ಉದ್ಯಾನವು ತಮ್ಮ ಲಿಂಗಾನಂದಕ್ಕೆ ಯೋಗ್ಯವಾದದ್ದೆಂದು ತಿಳಿದು, ಅಲ್ಲಿಯೇ ಅತಿಮನೋಹರವಾದ ಒಂದಾನೊಂದು ಸ್ಥಾನದಲ್ಲಿ ಪದ್ಮಾಸನವನ್ನು ಹಾಕಿ ಕುಳಿತುಕೊಂಡು, ನವದ್ವಾರಗಳನ್ನು ಬಂಧಿಸಿ ಪ್ರಾಣಾದಿಪಂಚವಾಯುಗಳನ್ನು ಅಲ್ಲಲ್ಲಿ ಇರುವ ಹಾಗೆ ಕಟ್ಟು ಮಾಡಿ ಅಂತಸ್ಸಂಕುಚಿತವಾದ ದೃಷ್ಟಿಯಿಂದ ಆಧಾರಾದಿಷಟ್ ಚಕ್ರಗಳಲ್ಲಿ ಕಂಗೊಳಿಸುತ್ತಿರುವ ಆಚಾರಾದಿಷಡ್ಲಿಂಗಗಳನ್ನು ನಿರೀಕ್ಷಿಸುತ್ತೆ ನಿಸ್ತರಂಗವಾದ ಪರಮಾನಂದ ಸಮುದ್ರವೋ ಎಂಬುವ ಹಾಗೆ ಮೆರೆಯುತ್ತಿದ್ದರು. ಹೀಗೆ ಆನಂದ ನಿರ್ಭರದಿಂದ ಜಗದ್ವ್ಯಾಪಾರವು ತೋರದೆ ಮೈಮರೆದು ಶೂನ್ಯ ರೂಪದೊಳ್ ಇರುವ ಕಾಲದಲ್ಲಿ ಆ ಬಾಚೀಗೊಂಡನಹಳ್ಳಿಯಲ್ಲಿ ಒಬ್ಬಾನೊಬ್ಬ ಧನಿಕನು ಯಕ್ಷ್ಮರೋಗಪೀಡಿತನಾಗಿ ದೇಹದಿಂದ ನಿರಂತರ ರಕ್ತವು ಪ್ರವಹಿಸಲಾಗಿ ನೋಡುತ್ತಿರುವ ಜನರಿಗೆ ಹೇಸಿಕೆಯನ್ನುಂಟುಮಾಡುತ್ತಿರಲು ಜನರೆಲ್ಲರು ಈತನು ಊರಲ್ಲಿ ಇರಗೂಡದು; ಈತನನ್ನು ನೋಡುವುದಕ್ಕೂ ಸ್ಪರ್ಶಿಸುವುದಕ್ಕೂ ಬಾರದು. ಹೇಗಾದರೂ ಈತನನ್ನು ಈ ಗ್ರಾಮದಿಂದ ಹೊರಗೆ ಹಾಕಬೇಕೆಂದು ಯೋಚಿಸಿ ಅವನನ್ನು ಹೊರನೂಗ್ಗಿಸಿದರು. ಹೀಗೆ ಹೊರಗೆಹಾಕಲ್ಪಟ್ಟವನಾಗಿ ಮಹಾಸ್ವಾಮಿಗಳು ತಪೋನಿಷ್ಠರಾಗಿ ಕುಳಿತುಕೊಂಡಿದ್ದ ಉಪವನದ ಸಮೀಪದಲ್ಲಿ ಒಂದು ಗುಡಿಸಲವನ್ನು ಕಟ್ಟಿಕೊಂಡು ಅದರಲ್ಲಿದ್ದು ತನ್ನ ಪತ್ನಿಜನನ್ಯಾದಿಗಳು ಮನೆಯಲ್ಲಿ ಮಾಡಿದ ಅನ್ನ ಮುಂತಾದನ್ನು ತರಿಸಿಕೊಂಡು ಅದನ್ನೇ ಸ್ವಲ್ಪವಾಗಿ ಭಕ್ಷಿಸುತ್ತೆ ಅತಿ ದುಃಖಾಕುಲನಾಗಿ ಕಾಲವನ್ನು ಕಳೆಯುತ್ತಿರುವಷ್ಟರಲ್ಲಿ ಪೂರ್ವ ವಾಸನೆಯೆಂಬ ಜಲವನ್ನು ಹಾಕಿ ಬೆಳಸಿದ ಪುಣ್ಯವೃಕ್ಷವು ಅಂದಿಗೆ ಫಲಿಸಿತೋ

ಎಂಬುವ ಹಾಗೆ ಏಕಕಾಲದಲ್ಲಿ ಮಹಾಸ್ವಾಮಿಗಳು ಆ ದೀನನ ದೃಷ್ಟಿಗೆ ಗೋಚರರಾದರು. ಕೂಡಲೇ ಆ ರೋಗಿಯ ಶರೀರದ ರೋಗವು ನಿವಾರಿತವಾಗಿ ಉದುರಿದ ಕೈಕಾಲುಗಳ ಬೆರಳುಗಳು ಚಿಗಿತು ದೇಹದಿಂದ ರಕ್ತಪ್ರಸರಣವು ನಿಲ್ಲಲು ದೇಹವು ಹೊಸದಾಗಿ ಖನಿಯಿಂದ ತೆಗೆದು ಪುಟಪಾಕದಿಂದ ಶೋಧಿಸಿದ ಸುವ ರ್ಣದ ಹಾಗೆ ಪ್ರಕಾಶಮಯವಾಯಿತು.ಆಗಲಾ ಮನುಷ್ಯನು ಅಪ್ರಾರ್ಥಿತಪ್ರಾಪ್ತ ಗಳಾದ ನೇತ್ರಗಳಿಂದ ಜನ್ಮಾಂಧನ ಹಾಗೆಯೂ ಚಿಂತಾಮಣಿಯನ್ನು ಪಡೆದ ದರಿದ್ರನ ಹಾಗೆಯೂ ಜನರಿಗೆ ಅತ್ಯಂತ ಜುಗುಪ್ಸೆಯನ್ನುಂಟುಮಾಡುತ್ತಿದ್ದ ತನ್ನ ರುಗ್ಣದೇಹವು ಹೀಗೆ ಕಾಂತ್ಯತಿಶಯದಿಂದ ಪ್ರಕಾಶಿಸುವುದನ್ನು ನೋಡಿ ಹಿಗ್ಗುತ್ತಿದ್ದನು. ಇದೆಲ್ಲಕ್ಕೂ ಮಹಾಸ್ವಾಮಿಗಳ ದಯಾರಸಭರಿತಕಟಾಕ್ಷವೀಕ್ಷ ಣವೇ ಕಾರಣವೆಂದು ತಿಳಿದು ಮಹಾಸ್ವಾಮಿಗಳ ಪ್ರಭಾವಾತಿಶಯಗಳನ್ನು ಹೊಗಳಿ ಇಲ್ಲಿಯೇ ಅನುಕೂಲವಾದ ಯೋಗಮಂಟಪವನ್ನು ಕಟ್ಟಿಸಿ ಅದರಲ್ಲಿ ಮಹಾಸ್ವಾಮಿಗಳನ್ನು ಇರಮಾಡಬೇಕೆಂದು ಯೋಚಿಸಿ ಮನೆಯಲ್ಲಿದ್ದ ನಾಲ್ವತ್ತು ಸಹಸ್ರ ವರಹಗಳನ್ನು ವಿನಿಯೋಗಿಸಿ ಒಂದು ದಿವ್ಯವಾದ ಧ್ಯಾನಮಂಟಪವನ್ನು ಕಟ್ಟಿಸಿ ಅದರೊಳ್ ಆನಂದಿಸುವುದಕ್ಕೆ ಮಹಾಸನ್ನಿಧಿಗೆ ಅರಿಕೆ ಮಾಡಿಕೊಂಡನು. ಆ ಭಕ್ತೋತ್ತಮನ ಬಿನ್ನಹವನ್ನು ಕಾರುಣ್ಯಸಮುದ್ರರಾದ ಆ ಮಹಾಸ್ವಾಮಿಗಳು ಅಂಗೀಕರಿಸಿ ಅದರೊಳ್ ಕೆಲಕಾಲ ಆನಂದಿಸುತ್ತಿರಲಾಗಿ ಮಲೆನಾಡಸೀಮೆಯಲ್ಲಿ ಹೆಸರಾದ ಅರಳೆಲೆಮಠದ ಪಟ್ಟಾಧಿಕಾರಿಗಳ ಶಿಷ್ಯನಾದ ನಿತ್ಯಬ್ರಹ್ಮಚಾರಿಯಾದ ಕೋರಿಸೆಟ್ಟಿಯೆಂಬ ಒಬ್ಬಾನೊಬ್ಬ ಭಕ್ತನು ತನ್ನ ವ್ಯವಹಾರದ ಸರಕುಗಳನ್ನು ತೆಗೆದುಕೊಂಡು ಪರಸ್ಥಲದಲ್ಲಿ ತಿರಗಾಡುತ್ತಿದ್ದಾಗ್ಗೂ ಗಣಮೂರ್ತಿಯ ಪಾದೋ ದಕಪ್ರಸಾದಗಳಿಲ್ಲದೆ ಆಹಾರವನ್ನು ಕೈಕೊಳ್ಳದಿರುವುದೊಂದು ದೃಢವಾದ ವ್ರತ ವನ್ನು ಎಡೆಬಿಡದೆ ಪಾಲಿಸುತ್ತಿದ್ದನು. ಆದರೆ ಅಲ್ಲಲ್ಲಿ ಜಂಗಮಮೂರ್ತಿಯನ್ನು ಹುಡುಕುತ್ತಿರುವುದಕ್ಕಿಂತ ಒಬ್ಬ ಬಾಲಗಣಮೂರ್ತಿಯನ್ನು ಸಂಗಡ ಕರೆದು ಕೊಂಡು ಸಂಚರಿಸಬೇಕೆಂದು ಯೋಚಿಸಿ ತನ್ನ ಗುರುವರ್ಯರಿಗೆ ಒಬ್ಬ ಬಾಲಗಣ ಮೂರ್ತಿಯನ್ನು ಕೊಡುವುದಾಗಿ ಬೇಡಿಕೊಂಡನು. ಆಗಲಾ ಪಟ್ಟಾಧಿಕಾರಿಗಳು ತಮ್ಮ ಮಠದಲ್ಲಿ ತ್ರಿಭುವನವಿಚಿತ್ರವಾದೊಂದಾನೊಂದು ಶಿಶುವು ಶಕ್ತಿವಿಶಿಷ್ಟ ನಾದ ಪರಮಾತ್ಮನ ಹಾಗೆ ಸ್ತ್ರೀಪುರುಷೋಭಯಾತ್ಮಕವಾದ ದೇಹದಿಂದೆ ಅರ್ಧ ನಾರಿಯೆಂಬ ಲೋಕವಿಖ್ಯಾತನಾಮದಿಂದಲೂ ತೋಟಪ್ಪನೆಂಬ ಪಿತೃಸಂಕೇತ ನಾಮದಿಂದಲೂ ಹೆಸರನ್ನು ಪಡೆದು ಈಗ ಎಂಟುವರುಷವುಳ್ಳದ್ದಾಗಿ ಶೋಭಿ ಸುತ್ತಿರುವುದು. ಈ ಮಹನೀಯನು ಮುಂದೆ ಜಗದ್ಗುರುತ್ವಕ್ಕೆ ಯೋಗ್ಯನಾಗಿ ದ್ದಾನೆ. ಈತನನ್ನು ನಿನ್ನ ಸಂಗಡ ಕರೆದುಕೊಂಡು ನಿನ್ನ ಇಷ್ಟಾನುರೂಪವಾಗಿ ಸಂಚರಿಸೆಂದು ನಿರೂಪಿಸಿ ಪರಮತೇಜೋರಾಶಿಯಾದ ನಿರಂಜನ ಶಿಶುವನ್ನು ಭಕ್ತ ನಿಗೆ ಒಪ್ಪಿಸಿದರು. ಆಗಲಾ ಭಕ್ತೋತ್ತಮನು ಭಕ್ತಾಂಗದಲ್ಲಿ ತವನುಗ್ರಹಾರ್ಥ

ವಾಗಿ ಇಷ್ಟಲಿಂಗರೂಪದಿಂದ ಪರಿಶೋಭಿಸುತ್ತಿರುವ ಪರಮಾತ್ಮನಂತೆ ತನ್ನ ಸ್ಕಂದದಲ್ಲಿ ಅಂದವಾದ ಶಿಶುರೂಪದಿಂದ ಜೆಳಗುತ್ತಿರುವ ಸಚ್ಚಿದಾನಂದಮೂರ್ತಿ ಯಿಂದೊಡಗೂಡಿ ಅನೇಕ ದೇಶಂಗಳನ್ನು ಸಂಚರಿಸುತ್ತೆ ಬಾಚೀಗೊಂಡನಹಳ್ಳಿಯ ಸಮೀಪದಲ್ಲಿರುವ ಹಗರಿಯ ದಡದಲ್ಲಿ ಮಹಾಸ್ವಾಮಿಗಳವರ ಯೋಗಮಂಟಪ ದಿಂದೊಪ್ಪುತ್ತಿರುವ ಉದ್ಯಾನದಲ್ಲಿ ಆ ಬಾಲಗಣಮೂರ್ತಿಯನ್ನು ಕುಳ್ಳಿರಿಸಿ ಹಗರಿಯಲ್ಲಿ ಸ್ನಾನಕ್ರಿಯೆಗಳನ್ನು ನೆರವೇರಿಸಿ ವಿಧಿಪ್ರಕಾರವಾಗಿ ಲಿಂಗಾರ್ಚನೆ ಯನ್ನು ತೀರಿಸಿ ಬಳಿಕ ಆ ಗಣಮೂರ್ತಿಯನ್ನು ಸ್ನಾನಲಿಂಗಾರ್ಚನಾನಂತರದಲ್ಲಿ ಪೂಜಿಸಿ ಪಾದೋದಕಪ್ರಸಾದಗಳನ್ನು ಸವಿದು ಭೋಜನವನ್ನು ಮಾಡಿ ಆ ಮೂರ್ತಿಯನ್ನು ಆ ಉಪವನದಲ್ಲಿ ಕುಳ್ಳಿರಿಸಿ ಊರಲ್ಲಿ ತನ್ನ ವ್ಯವಹಾರದ ಸರಕು ಗಳನ್ನು ವಿಕ್ರಯಿಸುವುದಕ್ಕೆ ಹೋದನು. ಇತ್ತಲಾ ಶ್ರೀ ಸ್ವಾಮಿಗಳು ಯೋಗ ಮಂಟಪದ ಹೊರಗೆ ನಿಜಾನಂದದಿಂದ ಸಂಚರಿಸುತ್ತಿರಲಾಗಿ ಆ ತೇಜೋ ಮೂರ್ತಿಯು ಅಕಸ್ಮಾತ್ ದೃಷ್ಟಿಗೆ ಗೋಚರವಾಯಿತು. ಆಗಲಾ ತೋಂಟದ ಕೌದೀಮಹಾಂತಯತಿವರರು ನಮಗೊಪ್ಪಿಸುವುದಕ್ಕಾಗಿಯೇ ಈ ದಿವ್ಯಮೂರ್ತಿ ಯನ್ನು ಒಬ್ಬ ಭಕ್ತನು ಇಲ್ಲಿಯೇ ಕುಳ್ಳಿರಿಸಿ ಹೋಗಿರುವನು. ನಾವು ಈ ಪರತರ ಮೂರ್ತಿಯನ್ನು ಅವಶ್ಯವಾಗಿ ಪರಿಗ್ರಹಿಸುವುದು ಯುಕ್ತವು. ನಮ್ಮದಾಗಿಯೇ ಇದು ವರೆಗೂ ಅನ್ಯರಲ್ಲಿ ಇರುತ್ತಿತ್ತೆಂದು ಯೋಚಿಸಿ ಆ ತೇಜಸ್ವಿಯನ್ನು ತಮ್ಮ ಯೋಗಮಠದೊಳಗೆ ಕರೆದುಕೊಂಡುಹೋದರು. ಇಷ್ಟರಲ್ಲಿ ಆ ಭಕ್ತನು ತನ್ನ ಸರಕುಗಳೆಲ್ಲವನ್ನು ಯೋಗ್ಯಬೆಲೆಗೆ ವಿಕ್ರಯಿಸಿ ಉದ್ಯಾನಕ್ಕೆ ಬಂದು ತಾನು ಕುಳ್ಳಿರಿಸಿದ ಸ್ಥಾನದಲ್ಲಿ ಗಣಮೂರ್ತಿಯನ್ನು ಕಾಣದೆ ಹುಡುಕುತ್ತಿದ್ದನು. ಇದನ್ನು ಮಹಾಸ್ವಾಮಿಗಳು ಯೋಗಮಂಟಪದಲ್ಲಿ ಕುಳಿತುಕೊಂಡು ಸಮಾಧಿ ದೃಷ್ಟಿಯಿಂದ ನೋಡಲಾಗಿ ಆ ಸದ್ಭಕ್ತನಿಗೆ ಎಂದೂ ಕಾಣದಿರುವ ಒಂದಾನೊಂದು ಮಾರ್ಗವು ದೃಷ್ಟಿಗೆ ಗೋಚರವಾಯಿತು. ಆ ಮಾರ್ಗವನ್ನು ಹಿಡಿದು ನಡೆದು ಬಂದು ಮಹಾಸ್ವಾಮಿಗಳು ಇರುವ ಯೋಗಮಂಟಪವನ್ನು ಕಂಡನು. ಅಲ್ಲಿ ಅನೇಕಕೋಟಿರವಿಪ್ರಭೆಯಿಂದೊಪ್ಪುತ್ತಿರುವ ಮಹಾಸ್ವಾಮಿಗಳಿಗೆ ಸಾಷ್ಟಾಂಗ ಪ್ರಣಾಮವಂ ಮಾಡಿ ಅವರನುಜ್ಞೆಯಿಂದೆದ್ದುನಿಂದು ಬದ್ಧಾಂಜಲಿಯಿಂದೆ ತಾನು ಕೈಕೊಂಡಿದ್ದ ನೇಮವನ್ನು ಬಿನ್ನವಿಸಿದನು. ಆಗಲಾ ಮಹಾಸ್ವಾಮಿಗಳು ಆಜ್ಞಾಪಿಸಿದ್ದೇನೆಂದರೆ—ಈ ವರೆಗೂ ನಿನ್ನೊಡನೆ ಕರೆದುಕೊಂಡು ತಿರಗುತ್ತಿದ್ದ ಈ ಬಾಲಗಣಮೂರ್ತಿಯು ನಮ್ಮದಾದುದರಿಂದ ನಾವು ಪರಿಗ್ರಹಿಸಿರುತ್ತೇವೆ. ನೀನಾದರೂ ಇಲ್ಲಿಯೇ ಇದ್ದು ಪ್ರತಿದಿನವೂ ನಿನ್ನಿಷ್ಟವನ್ನು ನೆರವೇರಿಸಿಕೊಳ್ಳ ತಕ್ಕದ್ದು. ಈ ಪ್ರಕಾರವಾದ ಶ್ರೀಸನ್ನಿಧಿಯ ಪರಮಪೂಜನೀಯವಾದಾಜ್ಞೆ ಯನ್ನು ಒಪ್ಪಿ ಆ ಭಕ್ತನು ಅಲ್ಲಿಯೇ ಮಹಾಸ್ವಾಮಿಗಳ ಸೇವಾತತ್ಪರನಾಗಿ

ಇರುತ್ತಿದ್ದನು. ಹೀಗೆ ಕೆಲದಿನಗಳು ಕಳೆದುಹೋಗಲು ಆ ಮಹಾಸ್ವಾಮಿಗಳಿಂದ ಷಟ್‌ಸ್ಥಲಬ್ರಹ್ಮೋಪದೇಶವನ್ನು ಪಡೆಯಲಿಚ್ಛೆಯಿಂದ ಮಹಾಸನ್ನಿಧಿಯನ್ನು ಬಹುದಿವಸಗಳಿಂದ ಸೇವಿಸುತ್ತಿದ್ದ ಏಳುನೂರು ವಿರಕ್ತಮೂರ್ತಿಗಳಿಗೂ ಹಾಗೂ ಅರ್ಧನಾರಿಯಾದ ತೋಟಪ್ಪನೆಂಬ ಬಾಲಗಣಮೂರ್ತಿಗೂ ಷಟ್‌ಸ್ಥಲತತ್ತ್ವೋಪದೇಶವನ್ನು ಮಾಡಿದರು. ಬಳಿಕಾಮಹಾಸ್ವಾಮಿಗಳು ಶೂನ್ಯಸ್ಥಲವನ್ನು ಸೇರುವ ಸಮಯವು ಸಮೀಪಿಸಲು ಅರ್ಧನಾರೀಶ್ವರಸ್ವಾಮಿಗಳಿಗೆ ಷಟ್‌ಸ್ಥಲಬೋಧಾಧಿಕಾರವನ್ನು ಕೊಟ್ಟು ಶೂನ್ಯಸಿಂಹಾಸನದೊಳ್ ಕುಳ್ಳಿರಿಸಿ ಷಟ್‌ಸ್ಥಲವನ್ನು ವಿಸ್ತರಿಸಬೇಕೆಂದಾಜ್ಞಾಪಿಸಿ ಅರ್ಧನಾರೀಶ್ವರಸ್ವಾಮಿಗಳ ಸೇವೆಯಲ್ಲಿಯೇ ಇರುವುದಾಗಿ ಆ ಕೋರಿಶೆಟ್ಟಿಯೆಂಬ ಸದ್ಭಕ್ತನಿಗೆ ಆಜ್ಞಾಪಿಸಿ ಶೂನ್ಯಸ್ಥಲವನ್ನು ಹೊಂದಿದರು.

## ಶ್ರೀಜಗದ್ಗುರು ತೋಂಟದ ಅರ್ಧನಾರೀಶ್ವರಾಯ ನಮಃ
## ೯ನೆಯ ಷಟ್‌ಸ್ಥಲಾಚಾರ್ಯಪಟ್ಟವು

ಭೀತಿಂ ದುರ್ಮತವಾದಿಘೂಕವಿತತೇರುತ್ಪಾದಯಂತಂ 1[ಸದಾ ।
ಸದ್]1 ರತ್ನಂ ವರವೀರಶೈವ ಜನತಾಚಕ್ರೌಘಮೋದಾಸ್ಪದಂ ।
ಕಂಥಾಧಾರಿಮಹಾಂತದೇವಯಮಿರಾಟ್ಪೂರ್ವಾದ್ರಿಲಬ್ಧೋದಯಂ ।
ರಾಜಂತಂ ಪ್ರಣಮಾಮಿ ಯೋಗಿಹೃದಯಾಕಾಶೇಽರ್ಧನಾರೀಶ್ವರಂ ||೯||

ಶ್ರೀಜಗದ್ಗುರು ತೋಂಟದ ಕೌದೀಮಹಾಂತಸ್ವಾಮಿಗಳು ಅರ್ಧನಾರೀಶ್ವರಸ್ವಾಮಿಗಳಿಗೆ ಷಟ್‌ಸ್ಥಲಾಚಾರ್ಯಪಟ್ಟವನ್ನು ಕೊಟ್ಟು ಶೂನ್ಯಸ್ಥಲವನ್ನು ಹೊಂದಿದ ನಂತರದಲ್ಲಿ ಆ ಸದ್ಭಕ್ತನಾದ ಕೋರಿಶೆಟ್ಟಿಯು ಶ್ರೀಸ್ವಾಮಿಗಳು ಆಜ್ಞಾಪಿಸಿದ ಮೇರೆಗೆ ತೋಂಟದ ಅರ್ಧನಾರೀಶ್ವರಮಹಾಸ್ವಾಮಿಗಳವರ ಸೇವಾತತ್ಪರನಾಗಿರುತ್ತಿರಲಿಕ್ಕೆ ಒಂದಾನೊಂದು ದಿವಸ ಮಹಾಸ್ವಾಮಿಗಳವರ ನಿರೂಪವಾದದ್ದೇನೆಂದರೆ– ಸ್ಥಲಾಂತರವನ್ನು ಕುರಿತು ದಯಮಾಡಿಸಲಪೇಕ್ಷೆ ಉಂಟಾಗಿರುವುದರಿಂದ ಈ ದಿವಸವೇ ಹೊರಡುವುದು ಎಂದು ಆ ಸದ್ಭಕ್ತನನ್ನು ಸಂಗಡ ಕರೆದುಕೊಂಡು ಹಗರಿಯನ್ನು ದಾಟಿ ಈಚೆಯ ದಡವನ್ನು ದಾಟುವುದರೊಳಗಾಗಿಯೇ ಏಳುನೂರು ವಿರಕ್ತಮೂರ್ತಿಗಳು ಆ ಯೋಗಮಂಟಪದಲ್ಲಿ ಗುರುವರ್ಯರನ್ನು ನೋಡಲು ಕಾಣದಿರಲಾಗಿ ಗುರುವರ್ಯರನ್ನು ಹುಡುಕುತ್ತ

1-1 ವಿಹಾಯೋ ? (ಮೂಲಪಾಠ).

ಹಗರಿಯ ಸಮೀಪಕ್ಕೆ ಬರಲು ಅಷ್ಟರಲ್ಲಿಯೇ ಎರಡೂ ದಡವು ತುಂಬು ವಂತೆ ಗಂಗಾಪ್ರವಾಹವು ಹೋಗಲು ದಾಟಲಿಕ್ಕೆ ಅಶಕ್ತರಾದದ್ದರಿಂದ ಅಲ್ಲಿಯೇ ನಿಂತರು. ಇತ್ತ ಮಹಾಸ್ವಾಮಿಗಳವರನ್ನು ಆ ಸದ್ಭಕ್ತನಾದ ಕೋರಿ ಶೆಟ್ಟಿಯು ಯಥಾಪ್ರಕಾರ ತನ್ನ ಸ್ಕಂದಪ್ರದೇಶದಲ್ಲಿ ಮುಹೂರ್ತಮಾಡಿಸಿ ಕೊಂಡು ಕಾವಿವಸ್ತ್ರದಿಂದ ಆಚ್ಛಾದಿತವಾದ ತಾಳೇವಾಲಿಯ ಕೊಡೆಯನ್ನು ಹಿಡಿದುಕೊಂಡು ಮಹಾಸ್ವಾಮಿಗಳವರನ್ನು ತನ್ನ ಇಷ್ಟಲಿಂಗರೂಪದಿಂದ ರಕ್ಷಿ ಸುತ್ತ ಡಂಬಳವೆಂಬ ಗ್ರಾಮಕ್ಕೆ ಬಂದನು. ಅಲ್ಲಿ ನೇತ್ರಕ್ಕೆ ಆನಂದವನ್ನುಂಟು ಮಾಡುವಂಥ ಒಂದಾನೊಂದು ಉದ್ಯಾನವು ಶೋಭಿಸುತ್ತಿತ್ತು. ಆ ಉದ್ಯಾನದ ಸಮೀಪದಲ್ಲಿ ಒಂದು ಬಿಲ್ವವೃಕ್ಷದ ನೆರಳಿನಲ್ಲಿ ಗದ್ದಿಗೆಯನ್ನು ಹಾಕಿ ಮುಹೂರ್ತ ಮಾಡಿಸಿ ಅಲ್ಲಿರತಕ್ಕ ಸರೋವರದಲ್ಲಿ ತಾನು ಸ್ನಾನಲಿಂಗಾರ್ಚನಕ್ರಿಯೆಗಳನ್ನು ತೀರಿಸಿಕೊಂಡ ನಂತರದಲ್ಲಿ ಮಹಾಸ್ವಾಮಿಗಳ ಸ್ನಾನಲಿಂಗಾರ್ಚನಾನಂತರದಲ್ಲಿ ಪಾದೋದಕಪ್ರಸಾದವನ್ನು ಸ್ವೀಕರಿಸಿಕೊಂಡು ಯಥಾಪ್ರಕಾರ ತನ್ನ ವ್ಯವಹಾರಕ್ಕೋಸ್ಕರ ಊರಲ್ಲಿ ಹೋಗಿ ತಿರಿಗಿಬರುವಷ್ಟರಲ್ಲಿ ಶ್ರೀಮಹಾಸ್ವಾಮಿ ಗಳು ಆ ವನದಲ್ಲಿ ದಯಮಾಡಿಸಿ ನೋಡುತ್ತಿರಲಾಗಿ ಅಲ್ಲಿ ಒಂದಾನೊಂದು ಎತ್ತರವಾದ ದೊಡ್ಡಬಸವಪ್ಪನೆಂಬ ಬಸವೇಶ್ವರಮೂರ್ತಿಯ ದೇವಾಲಯವು ಶೋಭಿಸುತ್ತಿತ್ತು. ಅಷ್ಟರಲ್ಲಿ ಆ ದೊಡ್ಡಬಸವಪ್ಪನಿಗೆ ತಿಳಿಯಲಾಗಿ ಓಹೋ ನನ್ನ ಗುರುಗಳು ದಯಮಾಡಿಸಿರುವರೆಂದು ಎದ್ದುಬಂದು ಸಾಷ್ಟಾಂಗ ಪ್ರಣಾಮಂಗಳಿಂದ ಬಿನ್ನಹವನ್ನು ಮಾಡಿ ತನ್ನಾಲಯದಲ್ಲಿ ಕರೆದೊಯ್ದು ಗದ್ದಿಗೆಯನ್ನು ಹಾಕಿ ಕುಳ್ಳಿರಿಸಲು, ಆಗ ಆ ಸ್ಥಲವು ಮನೋಹರವಾಗಿರುವುದ ರಿಂದ ಶ್ರೀಸ್ವಾಮಿಗಳು ಬಹಳೇ ಆನಂದದಿಂದ ತತ್‌ಕ್ಷಣದಲ್ಲಿಯೇ ಶಿವಯೋಗಾ ನಂದದೊಳ್ ಕುಳಿತರು. ಯೋಗಬಲದಿಂದ ಪರವಶರಾಗಿ ಭೂಮಿಯನ್ನು ಬಿಟ್ಟು ಅಂತರದಲ್ಲಿದ್ದರು. ಅಷ್ಟರಲ್ಲಿ ಕೋರಿಶೆಟ್ಟಿಯು ಬಂದು ನೋಡಲು ಮಹಾಸ್ವಾಮಿಗಳು ಕಾಣದಿರಲಾಗಿ ಹುಡುಕುತ್ತ ವನದಲ್ಲಿ ಪ್ರವೇಶಮಾಡಿ ಈ ದೇವಾಲಯವನ್ನು ಕಂಡು ಅದರಲ್ಲಿ ಹೋಗಿ ನೋಡುತ್ತಿರಲಿಕ್ಕೆ ಶ್ರೀಸ್ವಾಮಿಗಳ ಇರುವಿಕೆಯನ್ನು ಕಂಡು ಆಶ್ಚರ್ಯವುಳ್ಳವನಾಗಿ ಮಹಾಸ್ವಾಮಿಗಳ ಧ್ಯಾನದಲ್ಲಿ ಪರವಶನಾಗಿ ಅಲ್ಲಿಯೇ ಕುಳಿತನು. ಬಳಿಕ ಗುರುಗಳನ್ನು ಹುಡುಕುತ್ತ ಏಳು ನೂರು ವಿರಕ್ತರು ಡಂಬಳಕ್ಕೆ ಬಂದು ಅಲ್ಲಿಯ ಜನರ ಮುಖದಿಂದ ಶ್ರೀಸ್ವಾಮಿ ಗಳು ಕ್ರಿಯಾಕ್ಕೋಸ್ಕರ ಮುಹೂರ್ತಮಾಡಿದ ಸ್ಥಲವನ್ನು ತಿಳಿದು ಅಲ್ಲಿ ಬಂದು ನೋಡಲು ಕಾಣದಿರಲಾಗಿ ಸುತ್ತಲು ಹುಡುಕುತ್ತಿರಲಾಗಿ ವನದಲ್ಲಿ ಪಾದನ್ಯಾಸ ಗಳನ್ನು ಕಂಡು ಅಲ್ಲಿ ಪ್ರವೇಶಮಾಡಿ ಹುಡುಕಲು ಎತ್ತರವಾದ ದೇವಸ್ಥಾನವನ್ನು ಕಂಡರು. ಆ ಆಲಯದಲ್ಲಿ ಹೋಗಿ ನೋಡಲು, ಗುರುವರ್ಯರ ಇರುವಿಕೆ

ಯನ್ನು ಕಂಡು ಅತ್ಯಂತಾಸಂದಾಶ್ಚರ್ಯವುಳ್ಳವರಾಗಿ ನಮ್ಮನ್ನು ಮುಕ್ತರನ್ನಾಗಿ ಮಾಡಬೇಕೆಂದು ಅನೇಕ ವಿಧದಿಂದ ಪ್ರಾರ್ಥನೆಮಾಡಿದರು. ಆಗಲಾ ಅವರ ಭಕ್ತಿಗೆ ಮೆಚ್ಚಿ ಯೋಗವನ್ನು ಸಡಿಲಿಸಿ ಪ್ರತ್ಯಕ್ಷರಾಗಿ, ನಿಮ್ಮ ಇಷ್ಟಾರ್ಥವನ್ನು ಕೇಳಿನ್ನಲಾಗಿ ಆಗಲಾ ವಿರಕ್ತಮೂರ್ತಿಗಳು ಶಿವಾನುಭವವನ್ನು ಕೊಟ್ಟು ನಮ್ಮನ್ನು ಮುಕ್ತರನ್ನಾಗಿ ಮಾಡಬೇಕೆಂದು ಅರಿ ಮಾಡಿಕೊಳ್ಳಲಾಗಿ ಆಗ ಶ್ರೀ ಮಹಾಸ್ವಾಮಿಗಳು ಒಳ್ಳೇದೆಂದು ಏಳುನೂರುಮಂದಿ ವಿರಕ್ತರಿಗೂ ಶಿವಾನುಭವ ಚರಂತಿಗಿಯನ್ನು ಕೊಟ್ಟು ನಿಮ್ಮ ನಿಮ್ಮ ಲಿಂಗಪೂಜಾಪ್ರಭಾವದಿಂದ ಲೋಕದಲ್ಲಿ ಮೆರೆಯಿರೆಂದು ಅಪ್ಪಣೆಯನ್ನು ಕೊಟ್ಟು ಕಳುಹಿಸಿದರು. ಬಳಿಕ ಆ ಚರಮೂರ್ತಿಗಳು ಮೈಸೂರು, ಉರುವುಕೊಂಡ, ಸೊಂಡೂರು ಮುಂತಾದ ಅನೇಕ ಸ್ಥಲಂಗಳಲ್ಲಿ ಒಬ್ಬೊಬ್ಬರು ಒಂದೊಂದು ಮಠವನ್ನು ಸ್ಥಾಪಿಸಿ ತಮ್ಮ ಲಿಂಗಪೂಜಾ ಪ್ರಭಾವದಿಂದ ರಾಜಾಧಿರಾಜರಿಂದ ಅನೇಕ ಇನಾಮುಗಳನ್ನು ಪಡೆದು ಲಿಂಗಾನಂದದೊಳಿದ್ದರು. ಇತ್ತ ಮಹಾಸ್ವಾಮಿಗಳು ಬ್ರಹ್ಮಚಾರಿಯಾದ ಕೋರಿಶೆಟ್ಟಿಯನ್ನು ಕರೆದು ನೀನು ನಮ್ಮ ಸೇವಾದಲ್ಲಿ ತತ್ಪರನಾಗಿದ್ದುದರಿಂದ ನೀನು ಬಿಲ್ವಪತ್ರಿ, ಬನ್ನೀಪತ್ರಿ, ಕರಿಕೀಪತ್ರಿಗಳಿಂದ ತ್ರಿಕಾಲದಲ್ಲಿ ಲಿಂಗಾರ್ಚನೆಯನ್ನು ಮಾಡಬೇಕೆಂದು ಕೈಕೊಂಡ ನೇಮವನ್ನು ನಾವು, ನಮ್ಮ ಶಿಷ್ಯಪರಂಪರೆಯವರು ತ್ರಿಕಾಲದಲ್ಲಿ ನಡೆಯಿಸುತ್ತೇವೆಂದು ಅಪ್ಪಣೆಕೊಟ್ಟು ಬ್ರಹ್ಮಚಾರಿಗೆ ಷಟ್‌ಸ್ಥಲ ಬ್ರಹ್ಮೋಪದೇಶವನ್ನುಮಾಡಿ ಕಾವೀವಸ್ತ್ರದಿಂದ ಆಚ್ಛಾದಿತವಾದ ತಾಳೇವಾಲಿಯ ಕೊಡೆ, ಕೋರೀಟೊಪ್ಪಿಗಿ, ಅಳಲಿಬಣ್ಣದ ಕಂಬಳಿ, ಮಹಾಲಿಂಗಕಪನಿ, ಪುಸ್ತಕ ಇವೇ ಚಿಹ್ನವುಳ್ಳ ಅನ್ನದಾನ ಚರಂತಿಗೆಯನ್ನು ಕೊಟ್ಟು ಅನ್ನದಾನ ಮಾಡುತ್ತ ನಮ್ಮ ಸನ್ನಿಧಿಯಲ್ಲಿರುವುದೆಂದು ಆಜ್ಞಾಪಿಸಿ ಕಳುಹಿಸಿದರು. ಆ ಅನ್ನದಾನ ಚರಮೂರ್ತಿಗಳು ಮಹಾಸನ್ನಿಧಿಯಿಂದ ಅಪ್ಪಣೆಯನ್ನು ಪಡಕೊಂಡು ಮೃಡಗಿರಿಯೆಂಬ ಸ್ಥಲಕ್ಕೆ ಬಂದು ಅಲ್ಲಿ ಮಹತ್ವವನ್ನುಂಟುಮಾಡಿದರು. ಅಲ್ಲಿಯ ಭಕ್ತರು ಮಹಿಮಾಪುರುಷರಾದ ಅನ್ನದಾನದ ಚರಮೂರ್ತಿಗಳನ್ನು ಬಿಡದೆ ಅಲ್ಲಿಯೇ ಒಂದು ವಿಶಾಲವಾದ ಮಠವನ್ನು ಕಟ್ಟಿಸಿಕೊಟ್ಟರು. ಆ ಮಠದಲ್ಲಿ ಬಂದಂಥ ಭಕ್ತಮಾಹೇಶ್ವರರಿಗೆ ಅನ್ನೋದಕವನ್ನು ಕೊಡುತ್ತ ದೇಶದಲ್ಲೆಲ್ಲ ಮಹತ್ವಾತಿಶಯದಿಂದ ಸಂಚರಿಸಲಾಗಿ ಅನ್ನದಾನಸ್ವಾಮಿಯೆಂಬ ನಾಮವು ಲೋಕದಲ್ಲಿ ಪ್ರಸಿದ್ಧವಾಯಿತು. ಇತ್ತ ಮಹಾಸ್ವಾಮಿಗಳು ಆ ದೇವಾಲಯದಿಂದ ಹೊರಗೆ ಬಂದು ಸಂಚರಿಸಲಾಗಿ ಒಂದಾನೊಂದು ಗವಿಯು ದೃಷ್ಟಿಗೆ ಗೋಚರವಾಯಿತು. ಆ ಗವಿಯಲ್ಲಿ ಮಹಾಸ್ವಾಮಿಗಳು ಅಚಲತ್ವದಿಂದ ಒಪ್ಪಿದರು. ಅದು ಹೇಗೆಂದರೆ ತಮ್ಮ ಕರತಲದಲ್ಲಿದ್ದ ಲಿಂಗದಲ್ಲಿ ಮನಭಾವಕರಣಂಗಳನ್ನು ಏಕೀಕರಿಸಿ ನೋಡುತ್ತ ಅನಿಮಿಷೇಕ್ಷಣದಿಂದ ತಾವೇ ತಾವಾಗಿ ಬೇರಿಲ್ಲದ ಅಚಲತ್ವದಿಂದ ಘನಮಹಿಮನೊಪ್ಪಿರ್ದನು. ಅದೆಂತೆಂದೊಡೆ ತನು, ಮನ, ಧನವೇ ಪ್ರಾಣವಾಗಿ

ಹರಿಯುವ ಪ್ರಾಣವಾಯುವನ್ನು ದೃಢವಾಗಿ ಲಿಂಗಧ್ಯಾನದಿಂದ ಜಗ್ಗಿ ಅಧಿಕವಾದಂಥ ನಿರ್ಮಲಭಕ್ತಿಯೆಂಬ ಕುಂಡಲಿಯನ್ನು ಊರ್ಧ್ವಮುಖವಾಗಿ ಮಾಡಿ ಲಿಂಗವನ್ನು ಪ್ರಾಣದೊಡನೆ ಸಂಬಂಧಿಸಿ ಅಲ್ಲಿ ಪ್ರಾಣವಾಯುವನ್ನು ತಡೆದು ಬಳಿಕ ಷಡ್ರುಚಿಗೆ ಹರಿಯುತಕ್ಕಂಥ ಅಪಾನವಾಯುವನ್ನು ಹಿಡಿದು ಶಿವಲಿಂಗದ ಕಾಂತಿಯಿಂದ ಜಗ್ಗಿ ಮಹಾಲಿಂಗದಲ್ಲಿ ತಡೆಯುವುದೇ ಮೂಲಾಧಾರಬಂಧವು. ಅದನ್ನು ಬಲಿದು ಉದ್ಯೋಗಗಮನದೊಳಗೆ ಹರಿಯುವಂಥ ವ್ಯಾನವಾಯುವನ್ನು ಲಿಂಗಗಮನ ನೆನಹದಿಂದೆ ಜಗ್ಗಿ ನಂಬುಗೆಯು ಲಿಂಗಕ್ರಿಯಾಗಮನದಲ್ಲಿ ತಡೆದು ಚತುರ್ವಿಧಂಗಳನ್ನು ಬಯಸುವ ಉದಾನವಾಯುವನ್ನು ಸುಚಿತ್ತದಿಂದ ಜಗ್ಗಿ ವೈರಾಗ್ಯದಲ್ಲಿ ತಡೆದು ಕುಭಾಷೆಯೊಳ್ ಹರಿಯುವಂಥ ವ್ಯಾನವಾಯುವನ್ನು ಅತ್ತಿತ್ತ ಚಲಿಸದೆ ಮಹಾಲಿಂಗಧ್ಯಾನದಿಂದ ಜಗ್ಗಿ ಸ್ವಯಂಜ್ಯೋತಿರಾಕಾರ ನಿರ್ಮಲಶರಣನ ಭಾವದಲ್ಲಿ ತಡೆವುದೆ ಉಡ್ಯಾಣಬಂಧವು. ಅದನ್ನು ಬಲಿದು ಒಪ್ಪಿದರು. ಮತ್ತು ಕುಚಿತ್ತ ಕುಗೋಷ್ಠಿ ಕುಬುದ್ಧಿಯಲ್ಲಿ ಸಂಚರಿಸುವ ನಾಗವಾಯುವನ್ನು ಸುಜ್ಞಾನದಿಂದ ಜಗ್ಗಿ ಪರಮಚಿತ್ಕಾಂತಿಯಲ್ಲಿ ಸುಳಿಯುವ ಶರಣನ ಸದ್ಗೋಷ್ಠಿಯೊಳಗತ್ತಿತ್ತ ಚಲಿಸದೆ ತಡೆದು ದುಷ್ಕರ್ಮಮಾರ್ಗಕ್ಕೆ ಹರಿಯುವಂಥ ಕೂರ್ಮವಾಯುವನ್ನು ಶಿವಸ್ಮರಣೆಯಿಂದ ಜಗ್ಗಿ ಷಡಕ್ಷರಿಯ ಜಪಿಸುತ್ತ ಕ್ರಿಯೆಯೊಳಗೇಕೀಕರಿಸಿ ತಡೆದು ದುರ್ಗುಣದಲ್ಲಿ ಸಂಚರಿಸುವ ಕ್ರಕರವಾಯುವನ್ನು ಸದ್ಗುಣಧ್ಯಾನದಿಂದ ಎಳೆದು ಭಕ್ತಿಸುಖದೊಳು ತಡೆದು ಕೋಪದಲ್ಲಿ ಸಂಚರಿಸುವ ದೇವದತ್ತವಾಯುವನ್ನು ಪರಮಶಾಂತಿಯಿಂದ ಜಗ್ಗಿ ಕಾಪಾಲಿ ಭಕ್ತರೇ ಶ್ರೇಷ್ಠರೆಂದು ಅನ್ಯಮತವನ್ನು ಧಿಕ್ಕರಿಸುವ ಸ್ಥಾನದಲ್ಲಿ ತಡೆದು ಬಳಿಕ ಇನ್ನು ನಾನಾ ಪರಿಯೊಳಾಯಾಸದಿಂದ ಗಳಿಸಿದ ಅರ್ಥವನ್ನು ಈ ಪರಿಯಲ್ಲಿ ದಾನ ಧರ್ಮವ ಮಾಡಿ ಕೆಡಿಸಿದೆನೆಂಬ ಧನಂಜಯವಾಯುವನ್ನು ಆಯಾಸದಿಂದ ಗಳಿಸಿದ ಧನವನ್ನು ಅನರ್ಪಿತಕ್ಕೆ ಮಾಡಬಾರದೆಂಬ ಮನಸ್ಸಿನಿಂದ ಎಳೆದು ಗುರು ಲಿಂಗಜಂಗಮಕ್ಕೆ ಸವಿಯುವುದೆಂದು ತಿಳುವಳಿಕೆಯಲ್ಲಿ ತಡೆದು ಈ ಪ್ರಕಾರವಾದ ಜಾಲಂಧರಬಂಧವನ್ನು ಬಲಿದು ತಮ್ಮ ಕರದಲ್ಲಿದ್ದ ಇಷ್ಟಲಿಂಗವನ್ನು ದೃಷ್ಟಿಯೊಳ್ ಹಿಡಿದೊತ್ತಿ ಶಿರಬಾಗಿ ಚಿತ್ತದೊಳು ಮೂರ್ಧಕ್ಕೆ ಎಳೆದು ಪ್ರಾಣಮಧ್ಯದಿ ಸ್ವಸ್ಥದಿಂದ ತಡೆದು ತಮ್ಮ ಪ್ರಾಣವನ್ನು ಲಿಂಗದಿಂದ ರೇಚಿಸುತ್ತ,ಬಳಿಕ ಆ ಪ್ರಾಣವನ್ನು ವಸ್ತುವಿನೊಳಗೆ ಪೂರೈಸುವ ಶ್ರೇಷ್ಠವಾದ ಮುದ್ರೆಯನ್ನು ಮಾಡಿ ನೇತ್ರಗಳ ಊರ್ಧ್ವಕ್ಕೆ ಒಯ್ದು ಭ್ರೂಮಧ್ಯಕ್ಕೆ ಲಿಂಗವನ್ನು ತಂದು ನಿಲ್ಲಿಸಲಾಗಿ ಮನೋಹರವಾದ ಜ್ಞಾನಜ್ಯೋತಿಪ್ರಕಾಶದ ಸಮೂಹವು ದೃಷ್ಟಿಯು ಸಮ್ಮುಖದಲ್ಲಿ ತೋರಲಾಗಿ ಖೇಚರಮುದ್ರೆಯೆಂದು ಅಂಗೀಕರಿಸಿ ಲಿಂಗದೊಳು ದೃಷ್ಟಿಯನ್ನಿಟ್ಟು ಪ್ರಾಣವನ್ನು ಲಿಂಗದೊಳ್ ತಡೆದು ಬಿಡದೆ ಶಾಂಭವಿಮುದ್ರೆಯಿಂದಾಚರಿಸಿ ತಮ್ಮ

G. N. Nagaraj

ಹಸ್ತದೊಳಿರುವ ಲಿಂಗವನ್ನು ಷಡೇಂದ್ರಿಯಂಗಳೊಳಗೆ ಮುಚ್ಚಿ ಆ ಪ್ರಕಾಶವನ್ನು
ಪ್ರಾಣದೊಳ್ ತುಂಬಿ ನಿರಂತರದಲ್ಲಿ ಧ್ಯಾನಿಸುವಂಥ ಷಣ್ಮುಖಮುದ್ರೆಯನ್ನು
ಮಾಡಿ ಪರಶಿವನು ತನ್ನ ಲೀಲೆಯಿಂದ ಬಿಂದು, ನಾದ, ಕಲೆಯಾಗಿ ಷಡ್ವಿಧಲಿಂಗ
ವಾಗಿ ಆರಂಭವಾಗಿ ಲೋಕದವರಿಗೆ ತಿಳಿಯಲಶಕ್ಯರಾದ ತೋಂಟದ ಅರ್ಧನಾರೀ
ಶ್ವರಮಹಾಸ್ವಾಮಿಗಳವರು ತಮ್ಮ ಇಷ್ಟಲಿಂಗವನ್ನು ಧ್ಯಾನಿಸಿದರು. ಗುರುಕರ
ದೊಳುದಿಸಿ ವಿಧಿಗ್ರಂಥಿಯನ್ನು ಖಂಡಿಸುತ್ತೆ, ಸದ್ಭಕ್ತರ ಸಂಸರ್ಗಸುಸ್ಥಿಯಿಂದ ಹರಿ
ಗ್ರಂಥಿಯನ್ನು ಖಂಡಿಸುತ್ತೆ,ಅಧಿಕವಾದ ಲಿಂಗದೊಳ್ ಲೀನತೆಯನ್ನೈದಿ ರುದ್ರಗ್ರಂಥಿ
ಯನ್ನು ಖಂಡಿಸುತ್ತೆ, ತಿರಸ್ಕರಿಸುವ ಇಂದ್ರಿಯಂಗಳನ್ನು ಗೆಲ್ದು ಮಾಯೆಯನ್ನು
ಹೊಂದದೆ ಇರುವ ಶಿವನೇ ಲಿಂಗವು; ಅಂಬಿಕೆಯೇ ಅಂಗವೆಂದು ಭಾವಿಸಿ ಈಶ್ವರ
ಕೂಟವೆಂಬುದೇ ಲಿಂಗಾಂಗಸಂಗವೆಂದು ತಿಳಿದು ತತ್ತ್ವಮಸಿ ವಾಕ್ಯಾರ್ಥವನ್ನು
ಧ್ಯಾನಿಸಿ ಪಾವನಾತ್ಮಕಲಿಂಗವೇ ಶಿವನು, ಅಂಗವೇ ಈ ಜಗತ್ತು. ಈ ಎಲ್ಲವನ್ನು
ಲಿಂಗದಲ್ಲಿ ಅಡಕುಮಾಡಿ ಲಿಂಗಾಂಗಸ್ಥಲಯೋಗವೆಂದು ತಿಳಿದು ಧ್ಯಾನದಲ್ಲಿರು
ತಿರ್ದರು. ಹೃದಯಕಮಲದೊಳ್, ಭ್ರೂಮಧ್ಯದೊಳ್, ಬ್ರಹ್ಮರಂಧ್ರದೊಳ್
ಶಿವಲಿಂಗವನ್ನು ನೆಲೆಗೊಳಿಸಿ ಆಸಂದದೊಳ್ ತನುತ್ರಯಂಗಳಲ್ಲಿ ತ್ರಿವಿಧಲಿಂಗಂಗ
ಳನ್ನು ಅಡಗಿಸಿ ಷಡ್ವಿಧಲಿಂಗಂಗಳನ್ನು ಷಡಿಂದ್ರಿಯಂಗಳಲ್ಲಿ ನೆಲೆಗೊಳಿಸುತ್ತೆ ಧಾರ
ಣವೆಂದು ಶೋಭಿಸಿದರು. ಇಷ್ಟಲಿಂಗದಲ್ಲಿ ಕರಣಸಂಚಯಂಗಳಡಗಿ ಚಿದ್ಘನಲಿಂಗ
ದಲ್ಲಿ ಚಿದೃಕ್ಕು ನೆಲಸಿ ಅದು[1] ಲಿಂಗಾಂಗಸಮರಸವಾಗಿ ಲಿಂಗಕ್ರಿಯೆಗಳು ನಿಷ್
ಕ್ರಿಯೆಯಾಗಲದು ಸಮಾಧಿ. ಚಿತ್ತದೊಳ್ ಬುದ್ಧಿ, ಬುದ್ಧಿಯೊಳ್ ಅಹಂಕೃತಿ,
ಅಹಂಕೃತಿಯೊಳ್ ಮನ, ಮನದೊಳ್ ಜ್ಞಾನ, ಜ್ಞಾನದೊಳ್ ಭಾವ, ಭಾವ
ದೊಳ್ ಚಿತ್ಕಲೆ,ಚಿತ್ಕಲೆಯೊಳ್ ವಸ್ತು.ವಸ್ತುವಿನೊಳ್ ನಿಂದು ಅತ್ತಿತ್ತ ಚಲಿಸದೆ
ವಸ್ತುವೇ ತಾವಾಗಿ ಇರುತಿರ್ಪುದೇ ಸಮಾಧಿಯೆಂದು ಅದರಲ್ಲಿ ಒಪ್ಪಿದರು. ಅಧಿಕ
ವಾದಲಿಂಗವನ್ನು ಚಕ್ಷು ನುಂಗಿತು, ಚಕ್ಷುವನ್ನುಮನ ನುಂಗಿತು, ಆ ಮನವನ್ನು
ಭಾವನುಂಗಿತು, ಭಾವವನ್ನು ಚಿತ್ಕಲೆ ನುಂಗಿತು, ಆ ಚಿತ್ಕಲೆಯನ್ನು ವಸ್ತು
ನುಂಗಿತು. ಆ ವಸ್ತುವೇ ತಾವೇ ತಾವಾಗಿ ತನು, ಮನವನ್ನು ಮರೆದು ಪರಮ
ಕಾಷ್ಠ ಒಡೆದು ಅನ್ಯವನ್ನು ನೆನೆಯದೆ ನಾವು ಎಂಬುವ ನೆನಹು ಇಲ್ಲದ ಅಚ
ಲತ್ವದಿಂದಿರ್ದರು ತೋಂಟದ ಅರ್ಧನಾರೀಶ್ವರಮಹಾಸ್ವಾಮಿಗಳು. ಈ ಪ್ರಕಾರ
ಈರಾರು ಮಾಸಂಗಳ ವರೆಗೂ ಯೋಗಸಮಾಧಿನಿಷ್ಠರಾಗಿರುತ್ತಿರಲಿಕ್ಕೆ ಆ ಡಂಬಳ
ಸಂಸ್ಥಾನಿಕನಾದ ಶೈವಬ್ರಾಹ್ಮಣನಾದ ಶೀನಪ್ಪಯ್ಯಬಹದ್ದೂರನೆಂಬ ದೊರೆಯು
ರಕ್ತಪ್ರವಾಹದಿಂದ ಉದುರಿದ ಕೈಕಾಲು ಬೆರಳುಗಳುಳ್ಳ ಯಕ್ಷ್ಮರೋಗದಿಂದ ಪೀಡಿ
ತನಾದ ದೇಹವುಳ್ಳವನಾಗಿ ಕಾಶಿಯಲ್ಲಿ ಮರಣಂಗೈದರೆ ಗತಿಯಾಗುವುದೆಂದು

1 + ಸಮಾಧಿ (ಮೂಲಪಾಠ).

ನಿಶ್ಚಯಿಸಿ ಕೆಲವು ಸೇನೆಯೊಡನೆ ಕಾಶಿಗೆ ಪ್ರಯಾಣಂಗೈದನು. ಮಧ್ಯಮಾರ್ಗದಲ್ಲಿ ಆ ದೊರೆಗೆ ಬಾಲಗಣಮೂರ್ತಿಯು ರೂಪದಿಂದ ಮಹಾಸ್ವಾಮಿಗಳು ಪ್ರತ್ಯಕ್ಷರಾಗಿ ನಿರೂಪಿಸಿದ್ದೇನೆಂದರೆ– ನಿನ್ನಲ್ಲಿಯೇ ಕಾಶೀವಿಶ್ವನಾಥನು ನಿನ್ನ ಕಿಲ್ಲೇದ ಉತ್ತರ ದಿಕ್ಕಿನ ವನದಲ್ಲಿದ್ದಾನೆ. ತಿರುಗಿಹೋಗೆಂದು ನಿರೂಪಿಸಿ ಅದೃಶ್ಯರಾದರು. ಪುನಃ ಆ ದೊರೆಯು ನೋಡುವುದರೊಳಗಾಗಿಯೇ ಕಾಣದಿರಲು ಆಶ್ಚರ್ಯಯುಕ್ತನಾಗಿ ನಂಬುಗೆಯಿಂದ ಪುನಃ ತನ್ನ ಪಟ್ಟಣಕ್ಕೆ ಬಂದು ತನ್ನ ಪಟ್ಟಣದ ಉತ್ತರಕ್ಕೆ ಇರತಕ್ಕ ವನವನ್ನು ಕಡಿಸಿ ಶೋಧಿಸಲಾಗಿ ಉನ್ನತವಾದ ದೊಡ್ಡಬಸವೇಶ್ವರನ ದೇವಾಲಯವು ಶೋಭಿಸುತ್ತಿತ್ತು, ಅದರ ಮುಂಭಾಗದಲ್ಲಿ ಮಹಾಸ್ವಾಮಿಗಳು ಯೋಗದಲ್ಲಿ ಕುಳಿತಿದ್ದ ಯೋಗಮಂಟಪವನ್ನು ಕಂಡನು. ಅದರ ಸಮೀಪಕ್ಕೆ ಹೋಗಿ ನೋಡಲು ಸುವಾಸನಾಮಯವಾಗಿ ಇರುವುದನ್ನು ತಿಳಿದು ಇಲ್ಲಿಯೇ ವಿಶ್ವನಾಥನು ಇದ್ದಾನೆಂದು ನಿಶ್ಚಯಿಸಿ ಬೆಳಗಿನ ಜಾವದಲ್ಲಿ ಎದ್ದು ಸ್ನಾನಾದಿ ಕರ್ಮಗಳನ್ನು ತೀರಿಸಿಕೊಂಡು ಅನ್ಯರಿಗೆ ಗೋಚರವಾಗದಂತೆ ಬಂದು ಮಹಾಸ್ವಾಮಿಗಳವರ ಮಂಟಪದ ಸುತ್ತಲೂ ಸಮ್ಮಾರ್ಜನವನ್ನು ಮಾಡಿ ಪ್ರದಕ್ಷಿಣ ನಮಸ್ಕಾರವನ್ನು ಮಾಡಿ ಧೂಳಿಯನ್ನು ಮೈಗೆಲ್ಲ ಹಚ್ಚಿಕೊಂಡು ಹೋಗತಕ್ಕ ನಿತ್ಯಕರ್ಮವನ್ನು ಇಟ್ಟುಕೊಂಡನು. ಈ ಪ್ರಕಾರ ಕೆಲವು ದಿವಸ ಸೇವಾತತ್ಪರನಾಗುರುತ್ತಿರಲಿಕ್ಕೆ ಒಂದಾನೊಂದು ದಿವಸ ಆ ಡಂಬಳ ಗ್ರಾಮದಲ್ಲಿರತಕ್ಕಒಂಟಿ ಆಲದಪ್ಪನೆಂಬ ಮಾರುತಿಯು ಮಹಾಸ್ವಾಮಿಗಳವರಿಗೆ ಬಿನ್ನಹವನ್ನು ಮಾಡಬೇಕೆಂಬ ಇಚ್ಛೆಯಿಂದ ಆ ಹನುಮಪ್ಪನು ಮಧ್ಯರಾತ್ರಿಯಲ್ಲಿ ಸನ್ನಿಧಿಗೆ ಬಂದು ಬಿನ್ನಹವನ್ನುಮಾಡಿ ತನ್ನ ಆಲಯಕ್ಕೆ ಕರೆದೊಯ್ದು ಗದ್ದುಗೆಯನ್ನುಹಾಕಿ ಮುಹೂರ್ತ ಮಾಡಿಸಿ ಷೋಡಶೋಪಚಾರದಿಂದ ಪೂಜಿಸಿ ಪಾದೋದಕಪ್ರಸಾದವನ್ನು ಸ್ವೀಕರಿಸಿ ಪುನಃ ಮಹಾಸನ್ನಿಧಿಗೆ ಅರಿಕೆ ಮಾಡಿಕೊಂಡಿದ್ದೇನೆಂದರೆ– ನನ್ನ ಸ್ಥಾನದಲ್ಲಿ ವಾಸಮಾಡಬೇಕೆಂದು ನಿತ್ಯಬಿನ್ನಹವನ್ನು ಮಾಡಿಕೊಂಡನು. ಅದಕ್ಕೆ ಮಹಾಸ್ವಾಮಿಗಳವರು ಹನುಮಪ್ಪನ ಭಕ್ತಿಗೆ ಪ್ರಸನ್ನರಾಗಿ ಅಲ್ಲಿಯೇ ಇರುವುದಕ್ಕೆ ಒಪ್ಪಿದರು. ಬಳಿಕ ಡಂಬಳದ ದೊರೆಯಾದ ಶೀನಪ್ಪಯ್ಯನ ಸ್ವಪ್ನದಲ್ಲಿ ಹೋಗಿ 'ನೀನು ನನ್ನ ಗುರುಗಳ ಆಜ್ಞೆಯ ಮೇರೆಗೆ ನಡೆದುಕೊಳ್ಳಬೇಕು. ಗುರುವರ್ಯರಿಗೆ ಒಂದು ಧ್ಯಾನಮಂಟಪವನ್ನು ಕಟ್ಟಿಸಬೇಕು ಮತ್ತು ನಿತ್ಯದಾಸೋಹ ನಂದಾದೀವಿಗೆ ಮುಂತಾದವುಗಳನ್ನು ನಡೆಯಿಸಬೇಕು. ನಿನ್ನ ರೋಗಾದಿಗಳು ಗುರುಕೃಪೆಯಿಂದ ತೊಲಗಿ ನಿನ್ನ ದೇಹವೆಲ್ಲವು ಸ್ವಚ್ಛವಾಗುವುದು. ಪೂರ್ವಸುಕೃತವು ಇಂದಿಗೆ ಒದಗಿತೆಂದು ತಿಳಿದುಕೋ'ಎಂದು ಹೇಳಲು ಎಚ್ಚರವಾಗಿ ಎದ್ದು ಗಾಬರಿಸಿ ಆಶ್ಚರ್ಯವುಳ್ಳವನಾಗಿ ಇವತ್ತಿಗೆ ನನ್ನ ಪೂರ್ವದ ಪುಣ್ಯದ ಫಲದಿಂದ ಅಧಿಕವಾದ ಕರ್ಮವು ಇಂದಿಗೆ ನಾಶವಾಗತಕ್ಕ ಕಾಲವು ಬಂತೆಂದು ಬಹಳ ಸಂತೋಷ ಹೃದಯವುಳ್ಳವನಾಗಿ ಸ್ನಾನಾದಿ ಕರ್ಮಗಳನ್ನು ತೀರಿಸಿಕೊಂಡು ನಿತ್ಯದಂತೆ

ಮಹಾಸ್ವಾಮಿಗಳವರ ಸೇವೆಗೆ ಹೋಗಿ ನಿತ್ಯ ಕರ್ಮದಂತೆ ತನ್ನ ನೇಮವನ್ನು ತೀರಿಸಿಕೊಂಡು ಮಹಾಸನ್ನಿಧಿಯನ್ನು ಕುರಿತು ಅನೇಕ ವಿಧದಿಂದ ಸ್ತೋತ್ರ ವನ್ನು ಮಾಡಲಾಗಿ ಏಕಕಾಲದಲ್ಲಿಯೇ ಮಹಾಸ್ವಾಮಿಗಳು ಪ್ರಸನ್ನರಾದರು. ಸಾಷ್ಟಾಂಗಪ್ರಣಾಮಂಗಳನ್ನು ಮಾಡಿ ಬದ್ಧಾಂಜಲಿಪುಳ್ಳವನಾಗಿ ನಿಂತನು. ಬಳಿಕ ಗುರುವರ್ಯರು 'ಎಲೋ ದೊರೆಯೇ ನಿನಗೆ ಕಲ್ಯಾಣವಾಗಲಿ' ಯೆಂದು ಕೃಪಾದೃಷ್ಟಿಯಿಂದ ಆಶೀರ್ವದಿಸಿದ ಕೂಡಲೇ ಆ ದೊರೆಯ ದೇಹದಿಂದ ಸುರಿ ಯುವ ರಕ್ತವು ನಾಶವಾಗಿ ಉದುರಿದ ಕೈಕಾಲು ಬೆರಳುಗಳು ಚಿಗಿತು ಸುವರ್ಣ ದೋಪಾದಿಯಲ್ಲಿ ದೇಹದ ಕಾಂತಿಯು ಹೆಚ್ಚಿತು. ಆಗ ದೊರೆಯು ಸಂತೋಷ ಭರಿತನಾಗಿ ತನ್ನ ಪಟ್ಟಣದಲ್ಲಿ ಮಹಾಸ್ವಾಮಿಗಳವರನ್ನು ಅಡ್ಡಪಾಲಿಕಿ, ನಂದಿ ಧ್ವಜ, ಪಂಚಕಲಶ ಮೊದಲಾದ ಸರ್ವಬಿರುದಾವಳಿಗಳೊಡನೆ ಉತ್ಸವಮಾಡಿ ಒಂದು ಯೋಗಮಂಟಪವನ್ನು ಕಟ್ಟಿಸಿ ಮಹಾಸ್ವಾಮಿಗಳ ಸನ್ನಿಧಿಗೆ ಅರ್ಪಿಸಿ ದನು. ಆ ಯೋಗಮಂಟಪದಲ್ಲಿ ಮಹಾಸ್ವಾಮಿಗಳವರು ಶಿವಯೋಗಾನಂದ ದೊಡನೆ ವಾಸಿಸಿದರು. ಆ ದೊರೆಯು ನಿತ್ಯದಾಸೋಹ ನಂದಾದೀವಿಗೆ ನಡೆಸಿ ಅನೇಕ ಇನಾಮುಗಳನ್ನು ಹಾಕಿಕೊಟ್ಟು ಅತ್ಯಂತ ಭಕ್ತಿಪೂರ್ವಕವಾಗಿ ಮಹಾ ಸ್ವಾಮಿಗಳವರ ಸೇವಾತತ್ಪರನಾಗಿ ಸಿದ್ಧೇಶ್ವರನನ್ನೇ ಮನೆಯ ದೇವರನ್ನಾಗಿ ಮಾಡಿಕೊಂಡು ನಿತ್ಯದಲ್ಲಿ ಪೂಜಾಸಕ್ತನಾಗಿದ್ದನು. ಈ ಪ್ರಕಾರ ಆ ದೊರೆಯ ಭಕ್ತ್ಯಧೀನರಾಗಿ ಕೆಲವು ಕಾಲದ ವರೆಗೆ ಗುರುವರ್ಯರು ಇದ್ದು ಬಳಿಕ ಕೆಲವು ದಿವಸಗಳ ಮೇಲೆ ವಂಶಾನುಕ್ರಮದಿಂದ ತಮಗೆ ಸದ್ಭಕ್ತರಾಗಿ ನಡಕೊಳ್ಳುತ್ತಿದ್ದ ಕೆಳದಿ ಸಂಸ್ಥಾನಾಧಿಪರ ವಂಶದಲ್ಲಿ ಜನಿಸಿದ ಸೋಮಶೇಖರರಾಜನೆಂಬವನಿಗೆ ಇಷ್ಟಾರ್ಥವನ್ನು ಕೊಡಲು ಬಯಸಿ ಕೆಳದಿ ಸಂಸ್ಥಾನಕ್ಕೆ ಮಹಾಸನ್ನಿಧಿಯ ಸ್ವಾಮಿಯು ದಯಮಾಡಿಸಲಾಗಿ ಸೋಮಶೇಖರರಾಜನು ಬಿನ್ನಹವನ್ನು ಮಾಡಿ ಮಹಾಸ್ವಾಮಿಗಳನ್ನು ತನ್ನ ಮನೆಗೆ ಕರದೊಯ್ದು ಷೋಡಶೋಪಚಾರಗಳಿಂದ ಪೂಜಿಸಿ ತದೀಯ ಪಾದೋದಕಪ್ರಸಾದಂಗಳಿಂದ ಪರಿತೃಪ್ತನಾಗಿ ಲಕ್ಷದ ಮೇಲೆ ತೊಂಬತ್ತಾರುಸಾವಿರ ಗಣಾರಾಧನೆಯನ್ನು ಪೂರೈಸಿ ನಾನಾವಿಧಸೇವೆಗಳಿಂದ ಶ್ರೀ ಸ್ವಾಮಿಗಳನ್ನು ಸಂತೋಷಪಡಿಸಿ ಕೆಲವು ದಿವಸಗಳ ವರೆಗೆ ತನ್ನಲ್ಲಿಯೇ ವಾಸ ಮಾಡುವಂತೆ ಸನ್ನಿಧಿಯಿಂದ ಅಪ್ಪಣೆ ತೆಗೆದುಕೊಂಡು ಶ್ರೀ ಸ್ವಾಮಿಗಳಿಗೆ ಅನೇಕ ಗ್ರಾಮಗಳನ್ನು ಲಿಂಗಪೂಜಾವಿನಿಯೋಗಾರ್ಥವಾಗಿ ಜಾಹಗೀರ ರೂಪದಿಂದ ಒಪ್ಪಿಸಿದ್ದಲ್ಲದೆ ತನ್ನ ಸೀಮೆಯಿಂದ ಪರದೇಶಗಳಿಗೆ ವ್ಯಾಪಾರಮುಖದಿಂದ ಹೋಗುವ ಯಾಲಕ್ಕಿ, ಮೆಣಸು ಮುಂತಾದ ಸರಕುಗಳಿಗೆ ಕಟ್ಟಲ್ಪಡುವ ಸುಂಕದ ಆದಾಯವಾದರೂ ಸಂಪೂರ್ಣವಾಗಿ ಮಹಾಸ್ವಾಮಿಗಳಿಗೆ ಸಲ್ಲುವ ಹಾಗೆ ಕಟ್ಟುಮಾಡಿದನು. ಹೀಗೆ ಸೋಮಶೇಖರರಾಜನ ಭಕ್ತಿಗೆ ಪ್ರೀತರಾಗಿ ಪರಮಾನಂದದೊಳ್ ಮೆರೆಯುತ್ತಿರುವಾಗ್ಗೆ ಸೋಮಶೇಖರರಾಜನ ಚಿರಂಜೀವಿ

ಯಾದ ವೀರಭದ್ರನಾಯಕನೆಂಬುವನ ಧರ್ಮಪತ್ನಿಯಾದ ಮಲ್ಲಾಂಬಿಕೆಯ ಹೃದಯಗತವಾದ ತಮ್ಮ ಮೇಲಿನ ಭಕ್ತಿಭಾವವನ್ನು ಸಮಾಧಿದೃಷ್ಟಿಯಿಂದ ತಿಳಿದು 'ನಿನಗೆ ನಿನ್ನಂಥ ಭಕ್ತಿಸಂಪನ್ನನಾದ ಬಸವಪ್ಪನಾಯಕನೆಂಬ ಸತ್ಪುತ್ರನು ಜನಿಸುವನು' ಎಂದು ಆಜ್ಞಾಪಿಸಿ ಒಂದು ವಿಭೂತಿಯ ಘಟ್ಟಿಯನ್ನು ಕರುಣಿಸಿ ತಮ್ಮ ನಿಜವಾಸವಾದ ಡಂಬಳಸಂಸ್ಥಾನಕ್ಕೆ ತೆರಳಿದರು. ಈ ಅರ್ಥದಲ್ಲಿ ಪ್ರಮಾಣವು, ವೀರಶೈವಾನಂದಚಂದ್ರಿಕಾಕ್ರಿಯಾಕಾಂಡದಲ್ಲಿ:

ಜ್ಞಾನಾನುಗ್ರಹಪಾತ್ರತಾಮುಪಗತಸ್ತಸ್ಯಾತಿಮಾತ್ರಂ ಸ್ವಯಂ ।
ತೋಂಟಸ್ವಾಮ್ಯಥ ಸೋಽಮುಶೇಖರನೃ1[ಪಾಭೀ]1ಷ್ಟಾರ್ಥದಾನೇಚ್ಛಯಾ ।
ಆಗತ್ಯಾತಿಶಯೇನ ತತ್ಕೃತಮಹಾಪೂಜಾಪ್ರಹೃಷ್ಟಾಶಯೋ ।
ದತ್ವಾ ವಾಂಛಿತಮಸ್ಯ ಸರ್ವ ಜಗತೀಕ್ಷೇಮಂಕರೋಽರಾಜತ್ ॥೧॥

ವಿದ್ಯಾ ಯಸ್ಯ ವಧೂಃ ಕ್ಷಮಾಪ್ಯನುಚರಸ್ತೋಽಷಸ್ಸುತಶ್ಚ ಪ್ರಸೂ-।
ರ್ಭಕ್ತಿಸ್ತ್ವಾಪ್ತಸುಹೃಚ್ಛಮೋ ಜನಯಿತಾಚಾರೋಽಥ ಮೈತ್ರ್ಯಾದಯಃ ।
ಪುತ್ರ್ಯಃ ಕ್ಷೇತ್ರಮಶೇಷಮೇವ ಭುವನಂ ಧರ್ಮೋ ಮಹದ್ವಾಹನಂ ।
ನಷ್ಟಾ ಸತ್ಯಮಭೂತ್ಸನಿಸ್ಪೃಹತಯಾ ದೇಶೇಷು ಸಂಚಾರಿಣಃ ॥೨॥

ತೋಂಟಸ್ವಾಮೀ ತದಾನೀಂ ಹೃದಯಜುಷಮಪಿ ಪ್ರೇಕ್ಷ್ಯ ಮಲ್ಲಾಂಬಿಕಾಯಾ- ।
ಭಕ್ತಿಂ ಸುಜ್ಞಾನದೃಷ್ಟ್ಯಾ ನಿರುಪಮುದಯಯಾ ತಾವ2[ಕಾ]2ಭೀಷ್ಟ ಸಿದ್ಧಿಃ ।
ಜಾಯೇತ ಕ್ಷಿಪ್ರಮಿತ್ಥಂ ಪ್ರಮುದಿತಹೃದಯಃ ಕೀರ್ತಯಿತ್ವಾ ಸಪಶ್ಚಾತ್ ।
ಸ್ಥಾನಂ ಸ್ವಂ ಡಂಬಳಾಖ್ಯಂ ಪ್ರತಿಗಮನವಿಧೌ ಶೇಮುಷೀಂ ಚ ವ್ಯತಾನೀತ್ ॥೩॥

ಆವಾಗ್ಗೆ ವೇದಾಗಮಾದಿ ಸಕಲವಿದ್ಯಾವೈದುಷ್ಯದಿಂದ ಮಂಡಿತರಾಗಿ ಷಟ್‌ಸ್ಥಲಜ್ಞಾನಲಾಭಕ್ಕೋಸ್ಕರ ಪರತರಭಕ್ತಿಯಿಂದ ತಮ್ಮ ಕೈಂಕರ್ಯವನ್ನು ಮಾಡುತ್ತಿದ್ದ ಮರಿತೋಂಟದಾರ್ಯರೆಂಬ ದೇಶಿಕಮೂರ್ತಿಗೆ ದಯೆಯಿಂದ ಷಟ್‌ಸ್ಥಲತತ್ತ್ವೋಪದೇಶವನ್ನು ಮಾಡಿ ಈ ನಮ್ಮ ವಚನಕ್ಕನುಗುಣವಾಗಿ ಕಾಲಾಂತರದಲ್ಲಿ ಹೆಸರನ್ನು ಪಡೆಯುವ ಬೂದಿಬಸವಪ್ಪನಾಯಕನೆಂಬವನಿಗೆ ಉಪದೇಶಿಸುವ ಬಗೆಯಿಂದ ವೀರಶೈವಾನಂದಚಂದ್ರಿಕೆಯೆಂಬ ಗ್ರಂಥವನ್ನು ರಚಿಸೆಂದು ಆಜ್ಞಾಪಿಸಿದರು. ಈ ಅರ್ಥದಲ್ಲಿ ಪ್ರಮಾಣವು, ಇದೇ ವೀರಶೈವಾನಂದಚಂದ್ರಿಕಾ ಕ್ರಿಯಾಕಾಂಡದಲ್ಲಿ :

ನಿರ್ಗತ್ಯಾಥ ಸ ದೇಶಿಕಃ ಸ್ವವಸತಿಂ ಸಂಪ್ರಾಪ್ಯ ಮಾಂ ಪ್ರೇಮತೋ ।
ಜ್ಞಾನಾನುಗ್ರಹಪಾತ್ರತಾಮಪಿ ನಯನ್ ಕಾರುಣ್ಯಪಾಥೋನಿಧಿಃ ।
ವಾಚಂ ಮೇ ಮರಿತೋಂಟದಾರ್ಯಮನಸಿ ಪ್ರಕ್ಷಿಪ್ಯ ಕಾಲಾಂತರೇ ।
ವಸ್ತ್ವೈತದ್ವಚನಾನುರೂಪಮುಚಿತಂ ಕುರ್ವೀತ್ಯವಾದೀಚ್ಚ ಮಾಂ ॥೧೫॥

1-1 ಪಸ್ಯೇ. (ಮೂಲಪಾಠ) 2-2 ಕೋ. (ಮೂಲಪಾಠ).

ಇತ್ತಲಾ ಸ್ವಾಮಿಗಳು ನಿರೂಪಿಸಿ ದಯಪಾಲಿಸಿದ ವಿಭೂತಿಯ ಮಹತ್ವದಿಂದ ಮಲ್ಲಾಂಬಿಕೆಯ ಗರ್ಭದಿಂದ ಅನೇಕ ರಾಜಲಕ್ಷಣಲಕ್ಷಿತನಾದ ಗುರುಲಿಂಗ ಜಂಗಮಭಕ್ತಿಸಂಪನ್ನನಾದ ಪುತ್ರನು ಜನಿಸಿದನು. ಆ ಕುಮಾರನನ್ನು ಮಾತಾಪಿತೃಗಳು ವಿಧಿಪ್ರಕಾರವಾಗಿ ಹನ್ನೆರಡನೆಯ ದಿವಸದಲ್ಲಿ ಬಸವಪ್ಪನಾಯಕನೆಂದು ಕರೆದರು. ಬಳಿಕ ಶಿಶುವು ಒಂದು ವರ್ಷ ವಯಸ್ಸುಳ್ಳದಾಗಲಾಗಿ ವೀರಭದ್ರನಾಯಕನ ಭಕ್ತ್ಯತಿಶಯವನ್ನು ನೆನೆದು ಪುನಃ ಕೆಳದಿ ಸಂಸ್ಥಾನಕ್ಕೆ ಮಹಾಸ್ವಾಮಿಗಳು ದಯಮಾಡಿಸಿದರು. ಆಗ್ಗೆ ಮಹಾಸನ್ನಿಧಿಯ ಪಾದದಲ್ಲಿ ಈಡಾಡಿಸಿದ ಶಿಶುವನ್ನು ಕೃಪಾದೃಷ್ಟಿಯಿಂದ ನಿರೀಕ್ಷಿಸಿ 'ಬೂದಿಬಸವನೇ ಬಾ'ಯೆಂದು ಕರುಣಿಸಿ ಕರೆದಪ್ಪರಿಂದ ಬೂದಿಬಸವಪ್ಪನೆಂಬ ನಾಮಧೇಯಾಂತರವು ಲೋಕದಲ್ಲಿ ವಿಖ್ಯಾತವಾಯಿತು. ಅಲ್ಲಿಯೇ ಕೆಲವು ದಿನಗಳ ವರೆಗೆ ಲಿಂಗಾನಂದದೊಡನೆ ವಾಸಿಸಿ ವೀರಭದ್ರನಾಯಕನು ಸಪತ್ನಿಕನಾಗಿ ಭಕ್ತಿಯಿಂದ ಜಂಗಮಾರ್ಪಿತ ವಸ್ತುಯೆಂಬುದಾಗಿ ಒಪ್ಪಿಸಿದ ಧನಕನಕಾದಿಗಳನ್ನು ಮಹಾಸ್ವಾಮಿಗಳವರ ಮರಿಗಳು ಪರಿಗ್ರಹಿಸಿದರು. ಬಳಿಕ ಅಲ್ಲಿಂದ ಶ್ರೀಸ್ವಾಮಿಗಳು ಅದೇ ಮಲೆನಾಡಿನ ಈಸೂರೆಂಬ ಗ್ರಾಮಕ್ಕೆ ದಯಮಾಡಿಸಿ ಅಲ್ಲಿ ಒಂದು ಮಠದ ಅಯ್ಯನವರು ಭಕ್ತಿಪೂರ್ವಕವಾಗಿ ಒಪ್ಪಿಸಿದ ತೇಜೋಮೂರ್ತಿಗಳಾದ ಅನೇಕ ಯೋಗಲಕ್ಷಣಲಕ್ಷಿತರಾದ ನಂದೀಶ್ವರದೇವರೆಂಬುವರನ್ನು ಷಟ್ಸ್ಥಲೋಪದೇಶಗುರುತ್ವಕ್ಕೆ ಯೋಗ್ಯರನ್ನಾಗಿ ತಿಳಿದು ಪರಿಗ್ರಹಿಸಿ ಅವರನ್ನು ಸಂಗಡ ಕರೆದುಕೊಂಡು ಪುನಃ ಡಂಬಳಕ್ಕೆ ದಯಮಾಡಿಸಿದರು. ಅಂದಿನಿಂದ ಡಂಬಳದಲ್ಲಿಯೇ ಸ್ಥಿರವಾಗಿ ನಿಂತುಕೊಂಡರು. ಇತ್ತಲಾ ವೀರಭದ್ರನಾಯಕನು ಕೆಲದಿನಗಳು ಗತಿಸಲಾಗಿ ಗುರುವರ್ಯರಾದ ಶ್ರೀ ಸ್ವಾಮಿಗಳನ್ನು ದರ್ಶನಮಾಡಿಕೊಳ್ಳಬೇಕೆಂದು ಕುತೂಹಲಪಟ್ಟು ಡಂಬಳಕ್ಕೆ ಬಂದು ಅಲ್ಲಿ ಗುರುವರ್ಯರ ಇರುವಿಕೆಯ ಬಗೆಯನ್ನು ಕಂಡು ಸಂತೋಷಭರಿತನಾಗಿ ಪ್ರತಿಸಂವತ್ಸರದ ಮಾಘ ಶುಕ್ಲ ಪೂರ್ಣಿಮೆಯಲ್ಲಿ ಮಘಾನಕ್ಷತ್ರವು ಸೇರಿದ ಸಮಯದಲ್ಲಿ ಮಹಾಸ್ವಾಮಿಗಳವರ ರಥೋತ್ಸವವನ್ನು ನಡೆಯಿಸಬೇಕೆಂದು ಡಂಬಳದ ಸಂಸ್ಥಾನಾಧಿಪನಾದ ಬಹದ್ದೂರ ಶೀನಪ್ಪಯ್ಯನೊಡನೆ ಯೋಚಿಸಿ ನಿಯಮವನ್ನು ಮಾಡಿದನು. ಆಗಲಾ ಡಂಬಳದ ದೊರೆಯು ರಥೋತ್ಸವದ ವಿನಿಯೋಗಕ್ಕಾಗಿ ಒಂದು ಸಾವಿರದ ಇಪ್ಪತ್ತು ವರಹಗಳನ್ನು ಕೊಡುವುದಾಗಿ ಒಪ್ಪಿ ಶಾಸನಪತ್ರವನ್ನು ಬರಕೊಟ್ಟನು ಮತ್ತು ನಂದಾದೀವಿಗೆಯ ವಿನಿಯೋಗಕ್ಕಾಗಿ ತೊರೆನೀರ್ಲಗಿಯೆಂಬ ಒಂದು ಗ್ರಾಮವನ್ನು ಇನಾಮು ಹಾಕಿಕೊಟ್ಟನು. ಹೀಗೆ ಉಭಯಭಕ್ತರು ಭಕ್ತಿಪುರಸ್ಸರವಾಗಿ ಮಾಡುತ್ತಿದ್ದ ಸೇವೆಯಿಂದ ತೃಪ್ತರಾಗಿ ಆನಂದದೊಡನೆ ವಾಸಿಸಿದರು ಮತ್ತು ಹರಪನಹಳ್ಳಿ ದೊರೆಯಾದ ಸೋಮಶೇಖರರಾಜನು ಮೋಕ್ಷಾಪೇಕ್ಷೆಯುಳ್ಳವನಾಗಿ ಮಹಾಸ್ವಾಮಿ

ಗಳ ದರ್ಶನಕ್ಕೋಸ್ಕರ ಸೇನಾಸಮೇತನಾಗಿ ಡಂಬಳಕ್ಕೆ ಬಂದು ಮೂರು ತಿಂಗಳ ವರೆಗೂ ಮಹಾಸನ್ನಿಧಿಯ ಯೋಗಮಂಟಪದ ದ್ವಾರವನ್ನು ಕಾಯ್ದನು. ಅಕಸ್ಮಾತ್ ಒಂದಾನೊಂದು ದಿವಸ ಆ ದೊರೆಯ ಸುಕೃತಫಲದಿಂದ ಮಹಾಸ್ವಾಮಿಗಳವರ ದರ್ಶನವು ಆಯಿತು. ಆ ದೊರೆಯು ತನ್ನ ಇಷ್ಟಾರ್ಥವನ್ನು ಹಡಕೊಂಡು ಸನ್ನಿಧಿಯ ಅಪ್ಪಣೆ ತೆಗೆದುಕೊಂಡು ತನ್ನ ಪಟ್ಟಣಕ್ಕೆ ಹೋದನು. ಅನಂತರ ಮಹಾಸ್ವಾಮಿಗಳ ಲಿಂಗಪೂಜಾ ವಿನಿಯೋಗಕ್ಕಾಗಿ ಅಂಕಲಿ, ಮುದ್ಲಾಪುರ, ನೀಲಗುಂದ ಇವೇ ಮೊದಲಾದ ಐದು ಗ್ರಾಮಗಳನ್ನು ಇನಾಮು ಹಾಕಿಕೊಟ್ಟು ಶಾಸನಪತ್ರವನ್ನು ಬರೆದು ಮೋಹರು ಸಹಿಮಾಡಿ ಸನ್ನಿಧಿಗೆ ಕಳುಹಿಸಿದನು. ಮಹಾಸ್ವಾಮಿಗಳು ನಂದೀಶ್ವರದೇವರೇ ಮುಂತಾದ ವಿರಕ್ತದೇಶಿಕರಿಗೆ ಷಟ್‌ಸ್ಥಲೋಪದೇಶವನ್ನು ಮಾಡಿ ಕೊನೆಗೆ ಈಸೂರ ನಂದೀಶ್ವರಸ್ವಾಮಿಗಳಿಗೆ ಷಟ್‌ಸ್ಥಲಬೋಧಾಧಿಕಾರವನ್ನೊಪ್ಪಿಸಿ ಶೂನ್ಯಪೀಠದೊಳ್ ಕುಳ್ಳಿರಿಸಿ ತಮ್ಮ ಲಕ್ಷಣಂಗಳನೆಲ್ಲವನ್ನು ಅವರ ವಶಕ್ಕೆ ಕೊಟ್ಟು ತಮ್ಮ ಹೃದಯಾಂತರ್ವರ್ತಿ ದಹರಾಕಾಶಮಧ್ಯದೊಳ್ ಅನೇಕಕೋಟಿಸೂರ್ಯರನ್ನು ಧಿಕ್ಕರಿಸುವ ಪ್ರಭೆಯಿಂದ ಬೆಳಗುತ್ತಿರ್ಪ ಅಖಂಡ ಸಚ್ಚಿದಾನಂದಮಯವಾದ ಲಿಂಗರೂಪದಲ್ಲಿ ಬೆರೆತುಕೊಂಡರು.

ಇಲ್ಲಿಗೆ ನಿರಂಜನಜಂಗಮವಂಶದರ್ಪಣವೆಂಬ ಕೃತಿಯ ಪೂರ್ವಪೀಠಿಕೆಯು ಸಂಪೂರ್ಣವಾದುದು. ಶ್ರೀ ನಿರಂಜನಜಂಗಮಾರ್ಪಣಮಸ್ತು. ಶ್ರೀ ಪರಬ್ರಹ್ಮಣೇ ನಿರಂಜನಜಂಗಮಮೂರ್ತಯೇ ನಮಃ.

## ಶ್ರೀಜಗದ್ಗುರು ತೋಂಟದ ನಂದೀಶ್ವರಾಯ ನಮಃ

## ೧೦ನೆಯ ಷಟ್‌ಸ್ಥಲಾಚಾರ್ಯಪಟ್ಟವು

ಸ್ವಾಮೀ ನಂದೀಶನಾಮಾ ಜಯತಿ ಚರವರಃ ಪ್ರಾಪ್ತವಾನರ್ಘಸಾರೇ ।
ಯೋಗೀಂದ್ರಾತ್ಕಾಮಿಕಾ1[ದ್ಯೈಃ]1 ಶಿವಗದಿತನಯೋ ವೇದಸಾರೇ ಪ್ರಬೋಧಂ।
ಸ್ಪರ್ಧೇ ಸೂರ್ಯಸ್ಯ ಕೀರ್ತಿರ್ಜಗತಿ ಸುಜನತಾಯಾಯಭೀಷ್ಟಂ ಪ್ರದುಗ್ಧೇ ।
ತೇಜೋ ಯಸ್ಯೋಷ್ಣರೋಚಿಃ ಪರಿಹರತಿ ತಮೋ ಮೋಹರೂಪಂ ನರಾಣಾಂ ||೧೦||

1–1 ದ್ಯೋಃ (ಮೂಲಪಾಠ).

ಶ್ರೀಜಗದ್ಗುರು ತೋಂಟದ ಅರ್ಧನಾರೀಶ್ವರ ಮಹಾಸ್ವಾಮಿಗಳವರು ಈಸೂರಸಂದೀಶ್ವರಸ್ವಾಮಿಗಳಿಗೆ ಷಟ್‌ಸ್ಥಲಾಚಾರ್ಯಪಟ್ಟವನ್ನು ಕೊಟ್ಟು ಲಿಂಗದಲ್ಲಿ ಬೆರತ ನಂತರ ತೋಂಟದ ಈಸೂರಸಂದೀಶ್ವರಮಹಾಸ್ವಾಮಿಗಳು ಕೆಲವು ದಿವಸ ಡಂಬಳದಲ್ಲಿಯೇ ಶಿವಯೋಗಾನಂದದೋಳಿದ್ದರು. ಈ ಸ್ವಾಮಿಗಳು ಈಸೂರಲ್ಲಿ ಉತ್ಪತ್ತಿಯಾದದ್ದರಿಂದ ಈಸೂರಸ್ವಾಮಿಗಳೆಂದು ಜಗತ್ಪ್ರಸಿದ್ಧವಿದೆ. ಬಳಿಕ ಅನೇಕ ದೇಶಂಗಳನ್ನು ಸಂಚರಿಸುತ್ತೆ ಅಲ್ಲಲ್ಲಿ ಮಹಿಮಾತಿಶಯಗಳನ್ನು ತೋರಿಸುತ್ತೆ ವೀರಶೈವಮತದ ಉತ್ಕರ್ಷವನ್ನು ಹಬ್ಬಿಸುತ್ತೆ ಪರಮತಗಳನ್ನು ಜಯಿಸುತ್ತೆ ಷಟ್‌ಸ್ಥಲವನ್ನು ಸ್ಥಿರಂಗೊಳಿಸುತ್ತೆ ಪರಮಾನಂದದಿಂದ ಕೆಳದಿನಗರದ ಸೀಮೆಗೆ ರಾಜನಾದ ಬೂದಿಬಸವಪ್ಪನಾಯಕನ ಅರಮನೆಗೆ ದಯಮಾಡಿಸಿದರು. ಗುರುವರ್ಯರ ಪಾದಸನ್ನಿಧಿಯನ್ನು ಬಹುದಿವಸದಿಂದ ನಿರೀಕ್ಷಿಸುತ್ತಿದ್ದ ಬೂದಿಬಸವಪ್ಪದೊರೆಯು ಮಹಾಸ್ವಾಮಿಗಳನ್ನು ಷೋಡಶೋಪಚಾರಗಳಿಂದ ಏಕಾದಶರುದ್ರಾಭಿಷೇಕದಿಂದ ಪೂಜಿಸಿ ಲಕ್ಷದ ಮೇಲೆ ತೊಂಬತ್ತಾರುಸಹಸ್ರ ಗಣಮೂರ್ತಿಗಳನ್ನು ತೃಪ್ತಿಗೊಳಿಸಿ ಆ ಜಂಗಮಮೂರ್ತಿಗಳಿಗೆ ಭೂದಾನ ಮಾಡಿದ್ದಲ್ಲದೆ ಕನಕಾದ್ಯಾಭರಣಗಳನ್ನು ಸಮರ್ಪಿಸಿ ತಜ್ಜಂಗಮಮೂರ್ತಿಗಳ ಪಾದದ ಧೂಳಿಯಿಂದ ಮೂರು ಭಸ್ಮಗಟ್ಟಿಗಳನ್ನು ಕಟ್ಟಿಸಿ, ಒಂದು ತನ್ನ ಅರಮನೆಯಲ್ಲಿ ಒಂದು ಡಂಬಳದ ಮಹಾಸ್ವಾಮಿಗಳವರ ಯೋಗಮಂಟಪದಲ್ಲಿ ಒಂದು ವೃಡಗಿರಿ ಅನ್ನದಾನದ ಚರಮೂರ್ತಿಗಳು ಇರತಕ್ಕ ಮಠದಲ್ಲಿ— ಈ ಪ್ರಕಾರ ಮೂರು ಗಟ್ಟಿಗಳನ್ನು ಪೂಜಾಕ್ಕೋಸ್ಕರ ನೇಮಿಸಿ ಕಳುಹಿಸಿ ಮಹಾಸ್ವಾಮಿಗಳವರ ಆಶೀರ್ವಾದವನ್ನು ಹಡಕೊಂಡು ಸುಖದೋಳಿರ್ದನು. ಬಳಿಕ ಮಹಾಸ್ವಾಮಿಗಳು ಈಸೂರಿಗೆ ದಯಮಾಡಿಸಿ ಆ ಗ್ರಾಮದ ಸಮೀಪದಲ್ಲಿರತಕ್ಕ ಹೋರಿಹೊಳೆಯೆಂಬ ನದಿಯ ತೀರದಲ್ಲಿ ಒಂದು ಗವಿಯೊಳಗೆ ಶಿವಯೋಗಾನಂದದೊಳ್ ಕೆಲವುಕಾಲ ಇರ್ದರು. ಅನಂತರ ಅಣ್ಣಿಗೇರಿಗೆ ದಯಮಾಡಿಸಿ ಆ ಗ್ರಾಮದ ಸಮೀಪದಲ್ಲಿರತಕ್ಕ ಮಜ್ಜಿಗಿಗುಡ್ಡವೆಂಬ ಗ್ರಾಮದ ಮುಂದಿನ ಎತ್ತರವಾದ ಪ್ರದೇಶದಲ್ಲಿರತಕ್ಕ ಒಂದು ಗವಿಯೊಳ್ ಶಿವಯೋಗಾನಂದದೊಳ್ ಇರ್ದರು. ಕೆಲವು ದಿವಸ ಹೋದನಂತರಾ ಅಣ್ಣಿಗೇರಿಯಲ್ಲಿರತಕ್ಕ ವಿರೂಪಾಕ್ಷೇಶ್ವರಲಿಂಗವು ಭಕ್ತನ ವೇಷದಿಂದ ಮಧ್ಯರಾತ್ರಿಯಲ್ಲಿ ಹೋಗಿ ಶ್ರೀ ಸ್ವಾಮಿಗಳಿಗೆ ಬಿನ್ನಹವನ್ನು ಮಾಡಿ ತನ್ನ ಆಲಯಕ್ಕೆ ಕರೆದುಕೊಂಡು ಬಂದು ಗದ್ದುಗೆಯನ್ನು ಹಾಕಿ ಮುಹೂರ್ತ ಮಾಡಿಸಿ ಆ ಊರ ದೇಶಪಾಂಡೆಯಾದ ನಾಗಪ್ಪಯ್ಯನ ಸ್ವಪ್ನದಲ್ಲಿ ಹೋಗಿ 'ನನ್ನ ಗುರುಗಳು ಈ ಊರ ಪೂರ್ವದಿಕ್ಕಿನಲ್ಲಿ ಭೂಗತವಾಗಿರತಕ್ಕ ನನ್ನ ಆಲಯದಲ್ಲಿದ್ದಾರೆ.ಗುರುವರ್ಯರು ನನ್ನಲ್ಲಿಯೇ ಇರುವುದಾಗಿ ನೀನು ಬಿನ್ನಹವನ್ನು ಮಾಡಿ ಮಹಾಸ್ವಾಮಿಗಳವರ ಆಜ್ಞಾನುಸಾರವಾಗಿ ನಡಕೊಳ್ಳಬೇಕು' ಎಂದು ಹೇಳಲು, ಸ್ವಪ್ನವು ತಿಳಿದೆದ್ದು ದೇಶಪಾಂಡೆಯಾದ ನಾಗಪ್ಪಯ್ಯನು ತನ್ನ ಸ್ವಪ್ನದ

ರೀತಿಯನ್ನು ಹೇಳಿ ಆ ಪ್ರದೇಶಕ್ಕೆ ಬಂದು ನೋಡಲು ಭೂಮಿಯಲ್ಲಿ ದೇವಾಲಯವು ಇದ್ದ ಚಿಹ್ನವನ್ನು ಕಂಡು ಭೂಮಿಯನ್ನು ಅಗಿಸಿ ದೇವಸ್ಥಾನವನ್ನು ಬಯಲಿಗೆ ತೆಗೆದು ಅಲ್ಲಿ ಒಳಗೆಹೋಗಿ ನೋಡಲು ರವಿಕೋಟಿಪ್ರಭೆಯಿಂದೊಪ್ಪುತ್ತಿರುವ ಮಹಾಸ್ವಾಮಿಗಳನ್ನು ಕಂಡು ಸಾಷ್ಟಾಂಗಪ್ರಣಾಮಂಗಳನ್ನು ಮಾಡಿ ಎದ್ದು ಬದ್ಧಾಂಜಲಿಯಾಗಿ ನಿಂತು ಯಾವಾಗಲೂ ತನ್ನ ಗ್ರಾಮದಲ್ಲಿಯೇ ಇರುವುದಾಗಿ ಅರಿಕೆಮಾಡಿಕೊಂಡನು. ಆಗಲಾ ಮಹಾಸ್ವಾಮಿಗಳು ಸದ್ಭಕ್ತನ ಬಿನ್ನಹಕ್ಕೆ ಒಪ್ಪಿ ಅಲ್ಲಿಯೇ ಲಿಂಗಾನಂದದೊಳ್ ಇರುತ್ತಿರ್ದರು. ಅಲ್ಲಿಯ ದೇಸಾಯರು ಮುಂತಾದ ಸದ್ಭಕ್ತರು ಶ್ರೀ ಸ್ವಾಮಿಗಳ ಲಿಂಗಾನಂದಕ್ಕೆ ಯೋಗ್ಯವಾದ ಮಠವನ್ನು ಕಟ್ಟಿಸಿಕೊಟ್ಟದ್ದಲ್ಲದೆ ಲಿಂಗಪೂಜಾವಿನಿಯೋಗಕ್ಕಾಗಿ ಅನೇಕ ಭೂಮಿಗಳನ್ನು ಇನಾಮುವಾಗಿ ಒಪ್ಪಿಸಿದರು. ಮಹಾಸ್ವಾಮಿಗಳು ಆನಂದದೊಡನೆ ಲಿಂಗಪೂಜಾಲೋಲರಾಗುತ್ತಿರಲಿಕ್ಕೆ ಮಹಾಸನ್ನಿಧಿಯಲ್ಲಿ ರಾಜೋಟಿ ಮರಿದೇವರೆಂಬ ಮರಿಗಳು ಸೇವಾತತ್ಪರರಾಗಿರುತ್ತಿದ್ದರು. ಅತ್ಯಂತ ಭಕ್ತಿಯಿಂದ ಸೇವಿಸುತ್ತಿದ್ದ ಆ ಮರಿಗಳಿಗೆ ಶ್ರೀ ಸ್ವಾಮಿಗಳು ಪ್ರಸನ್ನರಾಗಿ ತಮ್ಮ ವಾಸಸ್ಥಾನವಾದ ವಿರೂಪಾಕ್ಷಲಿಂಗವು ಇದ್ದ ಆಲಯದ ಮೇಲುಭಾಗಕ್ಕೆ ಆ ಮರಿಗಳನ್ನು ಕರದೊಯ್ದು ಉತ್ತರಕ್ಕೆ ನೋಡೆಂದು ಅಪ್ಪಣೆಕೊಟ್ಟರು. ಆ ದಿಕ್ಕಿನಿಂದ ಗಣನೆ ಇಲ್ಲದಷ್ಟು ಪಂಚಮುದ್ರೆಯಿಂದ ಕೂಡಿದ ಜಂಗಮಮೂರ್ತಿಗಳು ಬರುವರೆಂದು ಅರಿಕೆಮಾಡಿಕೊಂಡನು. ದಕ್ಷಿಣಕ್ಕೆ ನೋಡೆಂದು ಅಪ್ಪಣೆಕೊಡಲು ಆ ದಿಕ್ಕಿನಿಂದ ಚತುರಂಗಬಲಸಮೇತವಾದ ರಾಜವೈಭವವೇ ಬರುತ್ತಿರುವುದೆಂದು ಅರಿಕೆಮಾಡಿಕೊಂಡನು. 'ನಿನಗೆ ಯಾವುದುಬೇಕು'ಎಂದು ಆ ಮರಿಗಳಿಗೆ ಮಹಾಸ್ವಾಮಿಗಳು ನಿರೂಪಿಸಿದರು. ಆಗಲಾ ಮರಿಗಳು ರಾಜವೈಭವವನ್ನು ಬೇಡಿಕೊಂಡರು. ಅದಕ್ಕೆ 'ನಿನಗೆ ರಾಜವೈಭವವು ಸಿಗುವುದು ಹೋಗು'ಎಂದು ಅಪ್ಪಣೆಕೊಟ್ಟು ಕಳುಹಿಸಿದರು. ಅಷ್ಟರಲ್ಲಿ ಕೆಳದಿದೊರೆಯಾದ ಬೂದಿಬಸವಪ್ಪನಾಯಕನು ಪ್ರಪಂಚದಲ್ಲಿ ನಿರಾಸಕ್ತನಾಗಿ ಮೋಕ್ಷಾಪೇಕ್ಷೆಯಿಂದ ಗುರುವರ್ಯರನ್ನು ಕುರಿತು, ಮೋಕ್ಷವನ್ನು ಪಡಕೊಳ್ಳಬೇಕೆಂದು ಡಂಬಳಕ್ಕೆ ಬಂದು ಮಹಾಸ್ವಾಮಿಗಳ ಯೋಗಮಂಟಪದ ದರ್ಶನವನ್ನು ತೆಗೆದುಕೊಂಡು ಅಲ್ಲಿಂದ ಅನ್ನಗಿರಿಯೆಂಬ ಗ್ರಾಮಕ್ಕೆ ಬಂದು ಮಹಾಸ್ವಾಮಿಗಳ ದರ್ಶನಾಶೀರ್ವಾದವನ್ನು ಪಡಕೊಂಡು 'ನಾನು ಭವಭವಾಂತರದಲ್ಲಿ ಹುಟ್ಟಿಹುಟ್ಟಿ ಸತ್ತು ಬೇಸತ್ತಿರುವೆನು. ಇನ್ನುಮೇಲೆ ಈ ಪ್ರಪಂಚವು ಬೇಡ. ನನಗೆ ಮೋಕ್ಷಕೊಟ್ಟು ರಕ್ಷಿಸಬೇಕು ಗುರುವೇ' ಎಂದು ಬಿನ್ನಹವನ್ನು ಮಾಡಿಕೊಂಡನು. ಆಗ ಮಹಾಸ್ವಾಮಿಗಳು ನಿರೂಪಿಸಿದ್ದೇನೆಂದರೆ— ನಿನಗೆ ಬ್ರಹ್ಮಜ್ಞಾನಮುಂಟಾಗಿ ಮೋಕ್ಷವಾಗುವುದು. ನೀನು ಕಾವಿವಸ್ತ್ರದಿಂದ ಆಚ್ಛಾದಿತವಾದ ತಾಳವಾಲಿಕೊಡೆ, ಕೋರಿಟೊಪ್ಪಿಗೆ ಇವೇ ಚಿಹ್ನವುಳ್ಳ ಮೃಡಗಿರಿಯಲ್ಲಿರುವ ನಮ್ಮ ಚರಮೂರ್ತಿಯಾದ ಅನ್ನದಾನಪ್ಪನು

ಕಪೋತಗುಡ್ಡದಲ್ಲಿ ಸಂಚಾರವಮಾಡುತ್ತಾನೆ. ಆತನನ್ನು ಭೆಟ್ಟಿಯಾಗು ಹೋಗು ಎಂದು ಅಪ್ಪಣೆಕೊಟ್ಟು ಕಳುಹಿದರು.

ಅಲ್ಲಿಂದ ಹೊರಟು ವೃಡಗಿರಿಗೆ ಬಂದು ಅನ್ನದಾನಸ್ವಾಮಿಗಳನ್ನು ಹುಡುಕುತ್ತ ಕಪೋತಗುಡ್ಡಕ್ಕೆ ಹೋದನು. ಅಲ್ಲಿಯ ಮಹಾಸ್ವಾಮಿಗಳು ನಿರೂಪಿಸಿದ ಪ್ರಕಾರ ಚಿಹ್ನವುಳ್ಳ ಅನ್ನದಾನಿಸ್ವಾಮಿಗಳನ್ನು ಕಂಡು ಸಂತೋಷಹೃದಯವುಳ್ಳವನಾಗಿ ಸಾಷ್ಟಾಂಗಪ್ರಣಾಮಂಗಳನ್ನು ಮಾಡಿ ಬದ್ಧಾಂಜಲಿಯಾಗಿ ನಿಂತು 'ಮೋಕ್ಷವನ್ನು ಕೊಡಬೇಕು ಗುರುವೇ'ಎಂದು ಸ್ತೋತ್ರವನ್ನುಮಾಡಿದನು. ಅನ್ನದಾನಿಸ್ವಾಮಿಗಳು ಹೇಳಿದ್ದೇನೆಂದರೆ 'ನಮ್ಮ ಗುರುವರ್ಯರ ದರ್ಶನಕ್ಕೆ ಹೋಗಿ ಅಪ್ಪಣೆಯನ್ನು ಪಡೆದುಕೊಂಡು ಬಂದಿರುವಿಯೋ' ಎಂದು ಕೇಳಲು 'ತಮ್ಮ ದರ್ಶನಕ್ಕೆ ಹೋಗೆಂದು ಮಹಾಸ್ವಾಮಿಗಳ ಅಪ್ಪಣೆ ಆಗಿರುವುದು' ಎಂದು ದೊರೆಯು ಹೇಳಲು, ಆಗ ಅನ್ನದಾನ ಚರಮೂರ್ತಿಗಳು ಹೇಳಿದ್ದೇನೆಂದರೆ– ಮಹಾಸ್ವಾಮಿಗಳ ಅನುಗ್ರಹ ಪ್ರಕಾರಕ್ಕೆ ನೀನು ಮಹಾಸನ್ನಿಧಿಯ ಶಿವಾಸುಭವಚರಮೂರ್ತಿಗಳಾದ ಮರಿತೋಂಟದಾರ್ಯರಿಂದ ವೀರಶೈವಾನಂದಚಂದ್ರಿಕೆಯೆಂಬ ಮತಗ್ರಂಥವನ್ನು ಮಾಡಿಸಿ ಮಹಾಸನ್ನಿಧಿಯ ಕಡೆಯಿಂದ ಬಂದ ಮರಿದೇವರಿಗೆ ನಿನ್ನ ಸಂಸ್ಥಾನವನ್ನೆಲ್ಲ ಒಪ್ಪಿಸಿ ಮೋಕ್ಷವನ್ನು ಹೊಂದು ಎಂದು ಹೇಳಿಕಳುಹಿಸಿದರು. ಅಲ್ಲಿಂದ ತನ್ನ ಅರಮನೆಗೆ ಹೋಗಿ ತನಗೆ ವೀರಶೈವರಹಸ್ಯವನ್ನು ತಿಳಿಹಿಸಬೇಕೆಂದು ಮರಿತೋಂಟದಾರ್ಯರನ್ನು ಪ್ರಾರ್ಥಿಸಿದನು. ಆಗಲಾ ಮರಿತೋಂಟದಾರ್ಯರು ಬೂದಿಬಸವಪ್ಪದೊರೆಗೆ ಬೋಧಾರೂಪವಾದ ವೀರಶೈವಾನಂದಚಂದ್ರಿಕೆಯೆಂಬ ಮತಗ್ರಂಥವನ್ನು ರಚಿಸಲು ಆ ರಾಜನು ಕೇವಲ ಭಕ್ತಿಯುಳ್ಳವನಾಗಿ ಮರಿತೋಂಟದಾರ್ಯರು ರಚಿಸಿದ ಗ್ರಂಥವನ್ನು ಕೇಳಿ ಪರಮಾನಂದದೊಳ್ ಮುಳುಗಿದನು.

ಬಳಿಕ ಮೌನಪ್ಪಪಂಡಿತನಿಂದ ವೀರಶೈವಾಚಾರಕೌಸ್ತುಭ ಗ್ರಂಥವನ್ನು ಮಾಡಿಸಿ ಹೀಗೆ ಅನೇಕ ಮತ ಗ್ರಂಥಗಳನ್ನು ತಿಳಿದು ಕೇವಲಬ್ರಹ್ಮಜ್ಞಾನಿಯಾಗಿ ಇರುತ್ತಿರಲಿಕ್ಕೆ ಮಹಾಸನ್ನಿಧಿಯಿಂದ ಅಪ್ಪಣೆ ತೆಗೆದುಕೊಂಡು ಹೊರಟ ರಾಚೋಟಿಮರಿಗಳು ಅನೇಕ ದೇಶಂಗಳನ್ನು ಸಂಚರಿಸುತ್ತ ರಾಜಾಧಿರಾಜರಿಂದ ಮನ್ನಣೆಯನ್ನು ಪಡೆಯುತ್ತ ಕೆಳದಿಗೆ ಬಂದು ದೊರೆಯನ್ನು ಕಾಣಿಸಿಕೊಂಡನು. ತ್ರಿಕಾಲಜ್ಞಾನಿಯಾದ ದೊರೆಯು ಸಾಕ್ಷಾತ್ ನನ್ನ ಗುರುಗಳು ದಯಮಾಡಿಸಿದರೆಂದು ತಿಳಿದು ಮಹಾ ಸ್ವಾಮಿಗಳವರ ಹೆಸರಿಲೆ ಅನೇಕ ಶಾಸನಪತ್ರಗಳನ್ನು ಬರಕೊಟ್ಟದ್ದಲ್ಲದೆ ತನ್ನ ಸಂಸ್ಥಾನವೆಲ್ಲ ಆ ಮರಿಗಳ ಹೆಸರಿಲೆ ಬರಕೊಟ್ಟು ತನ್ನ ರಾಜಕಿ ಶಿಕ್ಕಾದ ಉಂಗುರವನ್ನು ಅವರ ವಶಕ್ಕೆ ಕೊಟ್ಟು ಸಿಂಹಾಸನದ ಮೇಲೆ ಕುಳ್ಳಿರಿಸಿ ಸಾಷ್ಟಾಂಗವೆರಗಿ ಅವರಿಂದ ಅಪ್ಪಣೆಯನ್ನು ಹಡಕೊಂಡು ತನ್ನ

ಮಾತಾಪಿತೃಗಳು ಮೊದಲಾದವರೊಡನೆ ಮೋಕ್ಷವನ್ನು ಹೊಂದಿದನು. ಇತ್ತಲಾ ರಾಚ್ಕೋಟಿಮರಿಗಳು ಎರಡು ವರ್ಷಗಳ ವರೆಗೆ ರಾಜಕಾರಭಾರ ಮಾಡುತ್ತಿರಲಾಗಿ ಪರರಾಜರು ದಂಡೆತ್ತಿ ಬರಲು ಆ ರಾಜವಂಶದವನಾದ ಒಬ್ಬ ಕುಮಾರನನ್ನು ದತ್ತಕಮಾಡಿ ತಾನು ಅರಮನೆಯಲ್ಲಿರತಕ್ಕ ಕೆಲವು ಭಂಡಾರವನ್ನು ತೆಗೆದು ಕೊಂಡು ಡಂಬಳಕ್ಕೆ ಬರುತ್ತಿರಲಿಕ್ಕೆ ಮಾರ್ಗದಲ್ಲಿ ತುಂಗಭದ್ರಾನದಿಯ ಹತ್ತಿರ ಪರರಾಜರು ಬೆನ್ನುಹತ್ತಿ ಬಂದು ಮುತ್ತಿಗೆಹಾಕಲು ಕೆಲವು ದ್ರವ್ಯವು ಹೋಯಿತು. ಉಳಿದದ್ದು ತೆಗೆದುಕೊಂಡು ಡಂಬಳಕ್ಕೆ ಬಂದರು. ನಗರದ ಸೀಮೆಗೆ ದತ್ತಕ ಪುತ್ರನಾದ ದೊರೆಯು ಪರರಾಜರ ಕೂಡ ಯುದ್ಧಮಾಡಿ ಪರಾಜಿತನಾಗಿ ಇತ್ತ ಕಡೆಗೆ ಬಂದನು. ನರಗುಂದದಲ್ಲಿ ಈಗಲೂ ಅವರ ವಂಶದವರು ಇದ್ದಾರೆ. ಮಹಾಸ್ವಾಮಿಗಳು ಮೂರು ನಾಲ್ಕು ತಿಂಗಳ ಪರಿಯಂತರವಾಗಿ ಶಿವಯೋಗಾ ನಂದದೊಳ್ ಬೆರೆತುಕೊಂಡಿರ್ದು ಬಳಿಕ ಸ್ಪರ್ಶಿಸಲಶಕ್ಯವಾದ ಉಷ್ಣೋದಕ ಗಳಿಂದ ಸ್ನಾನವನ್ನು ಮಾಡುತ್ತಿದ್ದರು. ಆ ಸ್ನಾನದ ಸಲಿಲವು ಬೀದಿಯಲ್ಲಿ ಮಹಾಪ್ರವಾಹವಾಗಿ ಹರಿಯುತ್ತಿರುವಾಗ್ಗೆ ರೋಗಪೀಡಿತರೂ ನೇತ್ರಾದ್ಯಂಗವಿಕ ಲರೂ ಆ ಪ್ರವಾಹದಲ್ಲಿ ಮುಳುಗಾಡಿ ತಮ್ಮ ತಮ್ಮ ರೋಗಗಳ ಪರಿಹಾರವನ್ನು ಮತ್ತು ಅಂಗಸೌಷ್ಟವವನ್ನು ಪಡೆದುಕೊಳ್ಳುತ್ತಿದ್ದರು.

ಹೀಗೆ ಶ್ರೀಮಹಾಸ್ವಾಮಿಗಳ ದರ್ಶನವು ಅತ್ಯಪೂರ್ವವಾಗಲು ದೇಶ ದಲ್ಲಿಯ ಯಾವದ್ಭಕ್ತರು ಮತ್ತು ಮಾಹೇಶ್ವರರು, ನಿರಾಭಾರಿದೇಶಿಕರು ತಮಗೆ ಯಾವಾಗಲೂ ದರ್ಶನವನ್ನು ದಯಪಾಲಿಸುವ ಷಟ್‌ಸ್ಥಲತತ್ತ್ವಬೋಧಕ ಗುರು ವರ್ಯರನ್ನು ಅನುಗ್ರಹಿಸುವುದಕ್ಕಾಗಿ ಮಹಾಸ್ವಾಮಿಗಳನ್ನು ಪ್ರಾರ್ಥಿಸಿದರು. ಆಗಲಾ ಶ್ರೀತೋಂಟದ ಈಸೂರೇಶ್ವರಯತಿವರ್ಯರು ಆ ಯಾವದ್ಭಕ್ತಾದಿಗಳ ಪ್ರಾರ್ಥನೆಯನ್ನು ಅವರ ಮೇಲಿನ ಕರುಣಾತಿಶಯದಿಂದ ಒಪ್ಪಿ ತಮ್ಮ ಸನ್ನಿಧಿ ಯಲ್ಲಿ ಪ್ರೇಮಪಾತ್ರರಾಗಿದ್ದ ಉಗ್ಗದ ತೋಂಟದಾರ್ಯರೆಂಬ ದೇಶಿಕೋತ್ತಮ ರಿಗೆ ಷಟ್‌ಸ್ಥಲರಹಸ್ಯವನ್ನು ತಿಳುಹಿಸಿ ಅವರನ್ನೇ ಭಕ್ತಾದಿಗಳಲ್ಲಿ ಸಂಪ್ರದಾಯ ವನ್ನು ಪ್ರಚಾರಗೊಳಿಸುವ ಗುರುತ್ತಮರನ್ನಾಗಿ ನಿಯಮಿಸಿ ಅವರಿಗೆ ವಿಧಿ ಪ್ರಕಾರವಾಗಿ ಷಟ್‌ಸ್ಥಲಬೋಧಾಧಿಕಾರವನ್ನು ಕೊಟ್ಟು ಶೂನ್ಯಸಿಂಹಾಸನದೊಳ್ ಕುಳ್ಳಿರಿಸಿ ಭಕ್ತಾದಿಗಳನ್ನನುಗ್ರಹಿಸುವುದಾಗಿ ಆಜ್ಞಾಪಿಸಿ ಪುನಃ ಶಿವಯೋಗಾ ನಂದದಲ್ಲಿಯೇ ಬೆರೆತುಕೊಂಡು ನಿಶ್ಚಲರಾದರು.

# ಶ್ರೀಜಗದ್ಗುರು ಉಗ್ಗದ ತೋಂಟದ ಸಿದ್ಧಲಿಂಗಾರ್ಯರ್ಗಾಯ ನಮಃ

## ೧೧ನೆಯ ಷಟ್‌ಸ್ಥಲಾಚಾರ್ಯಪಟ್ಟವು

ನಂದೀಶಸ್ವಾಮಿವಕ್ತ್ರಾಂಬುಜಮಧುರಮಧುಕ್ಷೀರವಾರಾಶಿಜನ್ಮಾ ।
ಸೋಮದ್ವಿಟ್ಪ್ರಾಪ್ತಪಾಥೋರುಹನಿಕರಪರಿಮ್ಲಾ 1[ನ]1 ದೋಃ ಯಾಮಿನೀಶಃ ।
ವೃದ್ಧಿಂ ಶೈವಾಗಮಾಮ್ನಾಯಕುಮುದನುಕರಂದಾಂಬುಧೇರಾದಧಾನಃ ।
ಶ್ರೀಮಾನುಗ್ರೋಪನಾಮಾ ವಿತರತು 2[ಭೋಗಂ]2 ಸರ್ವದಾ
ತೋಂಟದಾರ್ಯಃ ॥ ೧೧ ॥

ಶ್ರೀಜಗದ್ಗುರು ತೋಂಟದ ನಂದೀಶ್ವರಸ್ವಾಮಿಗಳು ಉಗ್ಗದ ತೋಂಟದ ಮಹಾಸ್ವಾಮಿಗಳಿಗೆ ಷಟ್‌ಸ್ಥಲಾಚಾರ್ಯಪಟ್ಟವನ್ನು ಕೊಟ್ಟು ಶಿವಯೋಗಾನಂದದೊಳ್ ಕುಳಿತನಂತರದಲ್ಲಿ ತೋಂಟದ ಮಹಾಸ್ವಾಮಿಗಳವರು ಮಹಿಮಾತಿಶಯಂಗಳಿಂದ ಅನೇಕದೇಶಂಗಳನ್ನೆಲ್ಲ ಸಂಚರಿಸಿ ಅಲ್ಲಲ್ಲಿರತಕ್ಕ ರಾಜಾಧಿರಾಜರಿಂದ ಪೂಜೆಗೊಂಡವರಾಗಿ ಆ ರಾಜರಿಂದ ಕೊಡಲ್ಪಟ್ಟ ಭೂದಾನದ ಬಗ್ಗೆ ಅನೇಕ ಶಾಸನಪತ್ರಗಳನ್ನು ಸ್ವೀಕರಿಸಿಕೊಳ್ಳುತ್ತ ಕಾಶಿ, ಪಂಪಾಕ್ಷೇತ್ರವೇ ಮೊದಲಾದ ಶಿವಕ್ಷೇತ್ರಂಗಳಲ್ಲಿ ಅಡ್ಡಪಾಲ್ಕಿ, ನಂದಿಧ್ವಜ, ವ್ಯಾಸಭುಜವೇ ಮೊದಲಾದ ಸರ್ವಬಿರುದಾವಳಿಗಳಿಂದ ಮೆರೆದವರಾಗಿ ಪರಮತಗಳನ್ನು ವಾದದಲ್ಲಿ ಜಯಿಸಿ ವೀರಶೈವಮತವನ್ನು ವಿಸ್ತಾರಗೊಳಿಸುತ್ತ ಡಂಬಳಕ್ಕೆ ದಯಮಾಡಿಸಿದರು.

ಅಲ್ಲಿ ಕೆಲವು ವಿರಕ್ತಮೂರ್ತಿಗಳಿಗೆ ಷಟ್‌ಸ್ಥಲತತ್ತ್ವವನ್ನು ಬೋಧಿಸಿ ತತ್ತ್ವಜ್ಞಾನವನ್ನು ಉಂಟು ಮಾಡಿಕೊಟ್ಟು ಪುನಃ ಅಣ್ಣಿಗೇರಿಗೆ ದಯಮಾಡಿಸಿ ಅಲ್ಲಿ ಕೆಲವುಕಾಲದ ವರೆಗೂ ಶಿವಯೋಗಾನಂದದೊಳಿದ್ದು ಕಡೆಗೆ ತಮ್ಮ ಗುರುವರ್ಯರಾದ ತೋಂಟದ ಈಸೂರಮಹಾಸ್ವಾಮಿಗಳ ಅಪ್ಪಣೆಯ ಮೇರೆಗೆ ಸದಾಶಿವಸ್ವಾಮಿಗಳಿಗೆ ಶಿವಾನುಭವಶಾಸ್ತ್ರದ ಸಂಪಾದನವನ್ನು ಮಾಡಿಕೊಟ್ಟು ಬಳಿಕ ಷಟ್‌ಸ್ಥಲತತ್ತ್ವಜ್ಞಾನಿಗಳಾದ ಸದಾಶಿವದೇಶಿಕೇಂದ್ರಂಗೆ ಷಟ್‌ಸ್ಥಲಾಚಾರ್ಯಪಟ್ಟವನ್ನು ಕೊಟ್ಟು ಶೂನ್ಯಸಿಂಹಾಸನದೊಳ್ ಕುಳ್ಳಿರಿಸಿ ಷಟ್‌ಸ್ಥಲವನ್ನು ವಿಸ್ತರಿಸಬೇಕೆಂದಾಜ್ಞಾಪಿಸಿ ಬಯಲಾದರು.

1-1 ನಿ. 2-2 ಭೌಗಂ (ಮೂಲಪಾಠ).

## ಶ್ರೀಜಗದ್ಗುರು ತೋಂಟದ ಸದಾಶಿವಸ್ವಾಮಿಭ್ಯೋ ನಮಃ
## ೧೨ನೆಯ ಷಟ್‌ಸ್ಥಲಾಚಾರ್ಯಪಟ್ಟವು

ಸದಾಶಿವಾದುಗ್ಗದತೋಂಟದಾರ್ಯಕಾ- ।
ದ್ಗತಂ ಚರೇಶಾಚ್ಚರಸಾರ್ವಭೌಮತಾಂ ।
ಸದಾಶಿವೇ ಭಕ್ತಿಮತಾಂ ಸದಾ ಶಿವಂ ।
ದದಾನಮೀಡೇ ಯಮಿನಂ ಸದಾಶಿವಂ ॥ ೧೨ ॥

ಶ್ರೀಜಗದ್ಗುರು ತೋಂಟದ ಸದಾಶಿವಮಹಾಸ್ವಾಮಿಗಳು ಷಟ್‌ಸ್ಥಲಾಚಾರ್ಯಪಟ್ಟವನ್ನು ಹೊಂದಿದ ನಂತರದಲ್ಲಿ ಕೆಲವು ಶಿಲಾಮಂಟಪಗಳನ್ನು ಕಟ್ಟಿಸಿ ಅನೇಕದೇಶಂಗಳನ್ನೆಲ್ಲ ಮಹಿಮಾತಿಶಯಗಳಿಂದ ಸಂಚರಿಸಿ ಅಲ್ಲಲ್ಲಿ ವೀರಶೈವ ಮತವನ್ನು ವಿಸ್ತಾರಗೊಳಿಸುತ್ತ ಡಂಬಳಕ್ಕೆ ದಯಮಾಡಿಸಿ ಕೆಲವು ವಿರಕ್ತಮರಿಗಳಿಗೆ ಷಟ್‌ಸ್ಥಲಬ್ರಹ್ಮೋಪದೇಶವನ್ನು ಮಾಡಿ ಶಿವಯೋಗಾನಂದದೊಳ್ ಇರುತಿರಲಿಕ್ಕೆ ಭಕ್ತೋತ್ತಮನಾದ ಸಿದ್ದಪ್ಪನೆಂಬ ಶಿವಶರಣನು ಮಹಾಸ್ವಾಮಿಗಳಿಂದುಪದೇಶವನ್ನು ಪಡಕೊಂಡು ಕೊಪ್ಪಳದ ಪರ್ವತದಲ್ಲಿ ಒಂದು ಗವಿಯೊಳ್ ಲಿಂಗಾನಂದದೊಳಿರುತಿರಲಿಕ್ಕೆ ಆ ಸಿದ್ದಪ್ಪನು ಗವಿಯಲ್ಲಿರುವುದರಿಂದ ಆತನಿಗೆ ಗವಿಯಪ್ಪನೆಂಬ ನಾಮವು ಲೋಕಪ್ರಖ್ಯಾತವಾಯಿತು. ಆ ಗವಿಸಿದ್ದಪ್ಪನ ತಪೋಜ್ವಾಲೆಯು ಲೋಕವನ್ನೆಲ್ಲ ವ್ಯಾಪಿಸಲಾಗಿ ರೋಗಾದಿಗಳಿಂದ ಪೀಡಿತರಾದ ಜನಗಳು ಆ ಮಹಿಮಾಪುರುಷನಾದ ಗವಿಯಪ್ಪನನ್ನು ಸೇವಿಸಿ ತಮ್ಮತಮ್ಮ ಇಷ್ಟಾರ್ಥವನ್ನು ಪಡಕೊಳ್ಳುತ್ತಿದ್ದರು. ಮತ್ತು ದಾಸೋಹಕ್ಕೋಸ್ಕರ ಅನೇಕ ಭೂದಾನ ವಗೈರೆ ಕೊಟ್ಟದ್ದಲ್ಲದೆ ಅಲ್ಲಿಯ ರಾಜನಾದ ನಿಜಾಮನ ಮಂತ್ರಿಯು ತನ್ನ ಇಷ್ಟಾರ್ಥವನ್ನು ಪಡಕೊಂಡು ಐದುಗ್ರಾಮಗಳನ್ನು ದಾಸೋಹಕ್ಕೋಸ್ಕರ ಜಹಗೀರ ಹಾಕಿಕೊಟ್ಟನು. ಈಗಲೂ ಹಿರೇಬಗ್ನಾನಾಳವೆಂಬ ಗ್ರಾಮವು ನಡೆಯುತ್ತದೆ. ಈ ಪ್ರಕಾರ ಇರುತ್ತಿರಲಿಕ್ಕೆ ಗವಿಸಿದ್ದಪ್ಪನು ತನಗೆ ಒಬ್ಬ ಕ್ರಿಯಾಮೂರ್ತಿಯು ಬೇಕೆಂದು ಯೋಚಿಸಿ ತನ್ನ ಗುರುವರ್ಯರಾದ ತೋಂಟದ ಸದಾಶಿವಮಹಾಸ್ವಾಮಿಗಳನ್ನು ಪ್ರಾರ್ಥಿಸಲಾಗಿ ಆಗ ಮಹಾಸ್ವಾಮಿಗಳು ಕಾಶಿಯಿಂದ ಆರುಶಾಸ್ತ್ರಗಳಲ್ಲಿ ಪಂಡಿತರಾಗಿ ಬಂದ ಚೆನ್ನಬಸವದೇವರಿಗೆ ಷಟ್‌ಸ್ಥಲಬ್ರಹ್ಮೋಪದೇಶವನ್ನು ಮಾಡಿ ಶಿವಾನುಭವಚರಮೂರ್ತಿತ್ವವನ್ನು ಕೊಟ್ಟು ಕಳುಹಿಸಿದರು. ಆ ಗವಿಸಿದ್ದಪ್ಪನು ಆ ಚರಮೂರ್ತಿಗಳನ್ನು ಕರೆದುಕೊಂಡು ಹೋಗಿ ತನ್ನ ಮಠದಲ್ಲಿ ನೆಲೆಗೊಳಿಸಿ ದಾಸೋಹ ಮುಂತಾದ ಯಾವತ್ತೂ ಕಾರ್ಯಗಳನ್ನು 'ಜಂಗಮಾರ್ಪಣಮಸ್ತು'ಯೆಂದು ಆಚರಿಸುತ್ತ ಇದ್ದು, ಕಡೆಗೆ ತನ್ನ ಗುರುಗಳು ತನ್ನಲ್ಲಿಯೇ ಸದಾ ವಾಸಿಸಬೇಕೆಂದು ಯೋಚಿಸಿ ಗುರುವರ್ಯರ ಸನ್ನಿಧಿಗೆ ಬಂದು ಸಾಷ್ಟಾಂಗಪ್ರಮಾಣಪೂರ್ವಕವಾಗಿ ಅರಿಕೆಮಾಡಿಕೊಂಡನು. ಅದಕ್ಕೆ

ಮಹಾಸ್ವಾಮಿಗಳು ಒಪ್ಪಿ ಕೊಪ್ಪಳಕ್ಕೆ ದಯಮಾಡಿಸಿ ಗವಿಸಿದ್ದಪ್ಪನ ಭಕ್ತಿಯ ಲ್ಲಿಯೇ ಲಿಂಗಾನಂದದೊಳ್ ವಾಸಿಸಿದರು. ಬಳಿಕ ಕೆಲವು ದಿವಸ ಹೋದನಂತರ ಲ್ಲಿದ್ದ ಗವಿಸಿದ್ದಪ್ಪನು ಯೋಗಸಮಾಧಿಸ್ಥನಾದ ಮೇಲೆ ಮಹಾಸ್ವಾಮಿಗಳು ಅಪ್ಪಣೆ ಕೊಟ್ಟದ್ದೇನಂದರೆ 'ಕಲಿಯುಗದ ಐದುಸಹಸ್ರ ವರ್ಷಗಳು ತುಂಬುತ್ತಬಂದವು. ಇಲ್ಲಿಯ ವರೆಗೂ ಗುರುಲಿಂಗಜಂಗಮದಾಸೋಹಭಕ್ತಿ ಸದಾಚಾರ ಅಷ್ಟಾವರಣ ಮಹಿಮೆಗಳು ನಡೆಯುತ್ತ ಬಂದಂತೆ ಮುಂದೆ ನಡೆಯುವುದಿಲ್ಲ. ಗುರುಶಿಷ್ಯರಲ್ಲಿ ತಂದೆಮಕ್ಕಳಲ್ಲಿ, ಪತಿಪತ್ನಿಯರಲ್ಲಿ ಕಲಹ ಉಂಟಾಗುವುದು. ಅಷ್ಟಾವರಣದಲ್ಲಿ ಭಕ್ತಿಲೋಪವಾಗುವುದು. ವೀರಶೈವಾಚಾರಪದ್ಧತಿಯು ನಷ್ಟವಾಗುವುದು. ಕಲಿಯುಗದ ಐದುಸಹಸ್ರವರ್ಷಗಳ ಮೇಲೆ ಅಷ್ಟಾವರಣಮಹತ್ವವು ಗುಪ್ತ ವಾಗುವುದು. ನಾನು ಹೆಚ್ಚು ನೀನು ಹೆಚ್ಚು ಎಂದು ತಮ್ಮತಮ್ಮೊಳಗೆ ಕಲಹ ಉಂಟಾಗುವುದು. ಮತ್ತು ಉಪಚಾರಮಾತ್ರದ ಹಂಗಿನಭಕ್ತಿಯು ನಡೆಯು ವುದೇ ಹೊರತು ಇವರು ಪೂಜ್ಯರು ನಾವು ಪೂಜಕರು ಎಂಬ ಭಾವಕ್ಕೆ ಗುರು ತಾದ ಭಕ್ತಿಯು ಲೋಪವಾಗುವುದು. ಸ್ಫೋಟಕಾದಿರೋಗವು ಉಂಟಾಗಿ ಅನೇಕ ಪ್ರಾಣಿಗಳು ನಷ್ಟಗಳಾಗುವವು' ಎಂದು ಅನೇಕ ಪ್ರಕಾರವಾಗಿ ಕಾಲಜ್ಞಾನವನ್ನು ಅಂದರೆ ಭವಿಷತ್ಕಾಲದಲ್ಲಿ ನಡೆಯುವ ಸಂಗತಿಗಳ ಸ್ವರೂಪವನ್ನು ಹೇಳಿ ಮಹಾಂತಸ್ವಾಮಿಗಳಿಗೆ ಷಟ್‌ಸ್ಥಲಾಚಾರ್ಯಪಟ್ಟವನ್ನು ಕೊಟ್ಟು ಶೂನ್ಯ ಸಿಂಹಾಸನದಲ್ಲಿ ಕುಳ್ಳಿರಿಸಿ ಷಟ್‌ಸ್ಥಲವನ್ನು ವಿಸ್ತರಿಸಬೇಕೆಂದಾಜ್ಞಾಪಿಸಿ ತಮ್ಮ ಇಷ್ಟಲಿಂಗದಲ್ಲಿ ಬಯಲಾದರು.



## ಶ್ರೀಜಗದ್ಗುರು ತೋಂಟದ ಮಹಾಂತಸ್ವಾಮಿಭ್ಯೋ ನಮಃ
## ೧೩ನೆಯ ಷಟ್‌ಸ್ಥಲಾಚಾರ್ಯಪಟ್ಟವು

ನಿತ್ಯಂ ಭಾಂತಮುಮೇಶಭಕ್ತವಿಮಲಸ್ವಾಂತೇ ಮಹಾಂತಾಹ್ವಯಂ ।
ಸಂತೋಷಂ ತನುಮಂತಮಂತಕಭಯಭ್ರಾಂತ್ಯಂಧಕಾರಾರುಣಂ ।
ಪಂಪಾಂಭೋನಿಧಿಪತ್ತನೇಶಭಜಕಸ್ತೋಮಾಮರಾನೋಕಹಂ ।
ವಂದೇಽಹಂ ಯಮಿನಂ ಸದಾಶಿವಸುಧಾವಾರಾನ್ನಿಧೇರ್ನಿರ್ಗತಂ ||೧೩||

ಶ್ರೀಜಗದ್ಗುರು ತೋಂಟದ ಸದಾಶಿವಮಹಾಸ್ವಾಮಿಗಳು ಮಹಾಂತ ಸ್ವಾಮಿಗಳಿಗೆ ಷಟ್‌ಸ್ಥಲಾಚಾರ್ಯಪಟ್ಟವನ್ನು ಕೊಟ್ಟು ಬಯಲಾದನಂತರ

ದಲ್ಲಿ ತೋಂಟದ ಮಹಾಂತಸ್ವಾಮಿಗಳು ಮಹಿಮಾತಿಶಯಗಳಿಂದ ಅನೇಕ ದೇಶಂಗಳನ್ನು ಸಂಚರಿಸಿ ಡಂಬಳಕ್ಕೆ ದಯಮಾಡಿಸಿ ಅಲ್ಲಿಯ ಜಾತ್ರೆಯ ಕಾಲಕ್ಕೆ ಕೆಲವು ವಿರಕ್ತಮರಿಗಳಿಗೆ ಷಟ್‌ಸ್ಥಲಬ್ರಹ್ಮೋಪದೇಶವನ್ನು ಮಾಡಿ ಹಂಪಸಾಗ ರಕ್ಕೆ ದಯಮಾಡಿಸಿ ಅಲ್ಲಿಯ ತಮ್ಮ ಮಠದೊಳಗೆ ಒಂದು ಗವಿಯಲ್ಲಿ ಯೋಗಾ ನಂದದೊಳ್ ಮುಹೂರ್ತಮಾಡಿದರು. ಆಗ ಹರಪನಹಳ್ಳಿಯ ದೊರೆಯಾದ ಪುಟ್ಟರಸನೆಂಬವನು ಮಹಾಸ್ವಾಮಿಗಳವರ ದರ್ಶನವನ್ನು ತೆಗೆದುಕೊಳ್ಳಬೇ ಕೆಂದು ತನ್ನ ಸೇನಾಸಮೇತನಾಗಿ ಬಂದು ಮಹಾಸನ್ನಿಧಿಯ ಮಠದ ಮಹಾ ದ್ವಾರರಕ್ಷಕನನ್ನು ಕುರಿತು ತನ್ನನ್ನು ಒಳಗೆ ಬಿಡುವುದಕ್ಕೆ ಕೇಳಿದನು. ಅದಕ್ಕೆ ಆ ದ್ವಾರರಕ್ಷಕನು ಹೇಳಿದ್ದೇನೆಂದರೆ 'ನಮ್ಮ ಗುರುವರ್ಯರಾದ ಮಹಾ ಸ್ವಾಮಿಗಳು ಯಾವ ಜನಗಳಿಗೂ ದರ್ಶನವನ್ನು ಕೊಡುವುದಿಲ್ಲ ಮತ್ತು ಭವಿಗಳ ಮುಖಾವಲೋಕನವಂತೂ ಮೊದಲೇ ಇಲ್ಲ. ಹೀಗಿರುತ್ತಿರಲಿಕ್ಕೆ ನೀನು ಭವಿ ಇದ್ದು ನಿನಗಂತೂ ದರ್ಶನವೇ ಇಲ್ಲ. ಆದ್ದರಿಂದ ನೀನು ಹೋಗಕೂಡದು' ಎಂದು ತಡೆದನು. ಅದಕ್ಕೆ ಆ ದೊರೆಗೆ ರಾಜಮದವು ತಲೆಗೇರಿ ಏಕಕಾಲ ದಲ್ಲಿಯೇ ಕೋಪಾವಿಷ್ಟನಾಗಿ ಆ ಮಠಕ್ಕೆ ಮುತ್ತಿಗೆಹಾಕಿದನು. ಅಷ್ಟರಲ್ಲಿ ತುಂಗಭದ್ರಾನದಿಯಲ್ಲಿ ಮಹಾಸ್ವಾಮಿಗಳವರ ಅಂತೂ ಕೌಪೀನವನ್ನು ತೊಳೆಯ ತಕ್ಕಂಥ ಭೀಮನಿಗೆ ಸಮಾನವಾದ ಶಕ್ತಿಯುಳ್ಳ ಜಟ್ಟೀಪರ್ವತಮರಿಗಳು ಈ ಗದ್ದಲವನ್ನು ಕೇಳಿ ಅಲ್ಲಿಂದ ಏಕಕಾಲಕ್ಕೆ ಬಂದು 'ಎಲೋ ಗುರುದ್ರೋಹಿಯಾದ ಅಧಮನೇ ನಿಲ್ಲು' ಎಂದು ವೀರಬೊಬ್ಬೆಯನ್ನು ಹೊಡೆದು ಬಂದಿರತಕ್ಕ ಸೇನೆ ಯೊಡನೆ ಆನೆಯಿಂದ ಆನೆಗೆ ಕುದುರೆಯಿಂದ ಕುದುರೆಗೆ ಮನುಷ್ಯರಿಂದ ಮನುಷ್ಯ ರಿಗೆ ಹೊಡೆದು ಕೋಲಾಹಲಮಾಡಿ ಯಾವತ್ತೂ ಸೇನೆಯನ್ನು ನಾಶಮಾಡಿ ಆ ರಾಜನನ್ನು ಓಡಿಸಿದರು. ಈ ಗದ್ದಲವನ್ನು ಮಹಾಸ್ವಾಮಿಗಳು ಜ್ಞಾನ ಮಾರ್ಗದಿಂದ ತಿಳಿದು ಆ ದ್ರೋಹಿಯ ವಂಶವೆಲ್ಲ ನಾಶವಾಗಲೆಂದು ಶಪಿಸಿ ವೈರಾಗ್ಯವನ್ನು ತಳೆದರು. ಆಗ ಆ ದೊರೆಯು ತನ್ನ ಊರಿಗೆ ಹೋದ ಎಂಟು ದಿವಸದಲ್ಲಿಯೇ ದೇಹವೆಲ್ಲ ಉರಿಯುವುದೆಂದು ಸಂಕಟಪಟ್ಟು ಮೃತಪಟ್ಟನು. ಆ ರಾಜವಂಶವೆಲ್ಲ ನಾಶವಾಗಲು, ರಾಜ್ಯವೆಲ್ಲ ಪರರಾಜರ ಸ್ವಾಧೀನಕ್ಕೆ ಹೋಯಿತು, ಆಗ ಹೊಸದಾಗಿ ಇಂಗ್ಲೀಷ ಸರಕಾರವು ಬರಲು, ಆ ಸರಕಾರ ದವರು ಇನಾಮುಕಮಿಟಿಯನ್ನು ಮಾಡಿ ಇನಾಮದಾರರೆಲ್ಲರೂ ಹಾಜರಾಗ ಬೇಕೆಂದು ನೋಟೀಸಿನಿಂದ ತಿಳಿಸಿದರು. ಆಗ ಹಂಪಸಾಗರದ ಮತ್ತೂರ ಮಂಡೆಪ್ಪನೆಂಬ ಒಬ್ಬಾನೊಬ್ಬ ಸದ್ಭಕ್ತನು ಮಹಾಸ್ವಾಮಿಗಳ ದರ್ಶನವನ್ನು ತೆಗೆದುಕೊಂಡು ಈಗ ಹೊಸದಾಗಿ ಇಂಗ್ಲೀಷ ಸರಕಾರವು ಬಂದಿದೆ, ಇನಾಮ ದಾರರೆಲ್ಲರೂ ಹಾಜರಾಗಬೇಕೆಂದು ನೋಟಿಸಿನಿಂದ ತಿಳಿಸಿದ್ದಾರೆ. ಮಹಾಸನ್ನಿಧಿ ಯಿಂದ ಒಬ್ಬ ಮರಿಗಳಿಗೆ ಮೊಖ್ತಿಯಾರಿಕೊಟ್ಟು ಕಳುಹಿಸುವುದಕ್ಕೆ ಅಪ್ಪಣೆ

ಯಾಗಬೇಕು. ಅಂಹರೆ ನಮ್ಮ ಇನಾಮು ಯಾವತ್ತು ಉಳಿಯುತ್ತದೆಂದು ಅರಿಕೆಮಾಡಿಕೊಂಡನು. ಅವಕ್ಕೆ ಮಹಾಸ್ವಾಮಿಗಳು ಕೇವಲ ಬ್ರಹ್ಮಸ್ವರೂಪಿಗಳಾದ್ದರಿಂದ ಎಲೋ ಭಕ್ತೋತ್ತಮನೇ ಕೇಳು,'ಈ ಎಲ್ಲ ತ್ರಿಭುವನವು ಮೊದಲು ನಮ್ಮಲ್ಲಿ ಗುಪ್ತವಾಗಿದ್ದಿತು. ನಮ್ಮ ಇಚ್ಛಾಮಾತ್ರದಿಂದಲೇ ದೃಗ್ಗೋಚರವಾಯಿತು. ಕೆಲವು ದಿವಸಗಳ ಮೇಲಾದರೂ ನಮ್ಮಲ್ಲಿ ಅಡಕವಾಗುವುದು. ಈ ಎಲ್ಲವನ್ನು ನಾವೇ ವ್ಯಾಪಿಸಿಕೊಂಡಿರುವೆವು. ಹೀಗಿದ್ದೂ ಇದರಲ್ಲಿ ಯಾವುದೊಂದು ಭಾಗವನ್ನು ಕೊಡತಕ್ಕವರು ಕಸಕೊಳ್ಳತಕ್ಕವರು ಬೇರೆ ಯಾರಾದರೂ ಉಂಟೋ ? ಈ ಪೃಥ್ವಿಯನ್ನು ಯಾವ ವಂಶದ ರಾಜರೂ ಚಿರಕಾಲವಾಗಿ ಆಳಿ ಬದುಕಿದವರಿಲ್ಲ. ಒಂದು ಕಾಲದಲ್ಲಿ ಒಂದು ವಂಶದವರು ಬಲಿಷ್ಠರಾಗಿ ಆಳುತ್ತಿರುವಷ್ಟರಲ್ಲಿ ಮತ್ತೊಂದು ದೇಶದವರು ಬಲಿಷ್ಠರಾಗಿ ಬಂದು ಅವರ ಆಧಿಪತ್ಯವನ್ನು ಕಸಕೊಳ್ಳುವರು. ಹೀಗೆ ಪೃಥ್ವಿಯು ಬಹುನಾಯಕವುಳ್ಳದ್ದಾಗಿಯೇ ಇರುವುದು. ನಮ್ಮ ನಿಜವಾದ ನಿರಂಕುಶಪ್ರಭುತ್ವವನ್ನು ಕಸಕೊಳ್ಳಲು ಯಾವನೊರ್ವನೂ ಸಮರ್ಥನಾಗಲಾರನು. ಆದುದರಿಂದ ಈ ಪೃಥ್ವಿಯ ಏಕದೇಶದಲ್ಲಿ ನಮ್ಮ ಪ್ರಭುತ್ವವನ್ನು ಸ್ಥಾಪಿಸಿಕೊಳ್ಳುವುದಕ್ಕೆ ನಮ್ಮ ಪ್ರತಿನಿಧಿಯನ್ನು ಕಳುಹಿಸುವುದಿಲ್ಲವೆಂದು ವೈರಾಗ್ಯದಿಂದಪ್ಪಣೆಕೊಟ್ಟರು. ಆ ಸದ್ಭಕ್ತನು ಪುನಃ ಉತ್ತರಕೊಡಲಿಕ್ಕೆ ಭಯಗ್ರಸ್ತನಾಗಿ ಸುಮ್ಮನೇ ಆದನು. ಇತ್ತ ಯಾರೂ ಮುದ್ದತಸೀರ ಹಾಜರಾಗದೇ ಇದ್ದ ಕಾರಣ ಯಾವತ್ತೂ ಇನಾಮುಗ್ರಾಮುಗಳನ್ನು ಸರಕಾರದಿಂದ ಬರತಕ್ಕ ಹಣವನ್ನು ಸಹ ಸರಕಾರದವರು ಖಾಲಸಾತ ಮಾಡಿದರು. ಕೆಲವು ಇನಾಮುಗಳನ್ನು ಆಯಾಯ ವಿರಕ್ತಮಠದಲ್ಲಿದ್ದ ಮಹಾಸ್ವಾಮಿಗಳವರ ಶಿಷ್ಯರಾದ ಚರಮೂರ್ತಿಗಳು ಮತ್ತು ಮಠದ ಮರಿಗಳು ಮೊದಲಾದವರು ತಮ್ಮ ಗುರುಗಳ ಮೇಲಿನ ಅಭಿಮಾನದಿಂದ ಉಳಿಸಿಕೊಂಡರು. ಇತ್ತ ಮಹಾಸ್ವಾಮಿಗಳು ಪರತರವೈರಾಗ್ಯಶೀಲರಾಗಿ ಲೌಕಿಕವೃತ್ತಿಯನ್ನು ಲಕ್ಷಿಸದೆ ಇರುವುದರಿಂದ ಆಯಾಯ ಮಠಗಳಲ್ಲಿರುವ ಚರಮೂರ್ತಿಗಳು, ಮರಿಗಳು ಮೊದಲಾದವರು ಉಳಿಸಿಕೊಂಡ ಇನಾಮಭೂಮಿಗಳನ್ನು ಸ್ವತಃ ಹಕ್ಕಿನಿಂದ ಉಪಭೋಗಿಸಹತ್ತಿದರು. ಈ ಪ್ರಕಾರ ಕೆಲವು ದಿವಸಗಳು ಕಳೆದುಹೋದಮೇಲೆ ಎಲ್ಲ ವಿರಕ್ತರು ಸ್ವತಂತ್ರರೀತಿಯಿಂದ ಆಚರಿಸಲಿಕ್ಕೆ ಹತ್ತಿದರು. ಅನಂತರ ಮಹಾಸ್ವಾಮಿಗಳು ತಮ್ಮ ಮರಿಗಳಾದ ತೋಂಟದದೇವರೆಂಬ ರಾಜಯೋಗಿಗಳಿಗೆ ಷಟ್‌ಸ್ಥಲಬ್ರಹ್ಮೋಪದೇಶಮಾಡತಕ್ಕ ಅಧಿಕಾರವನ್ನು ಕೊಟ್ಟು ಶೂನ್ಯಸಿಂಹಾಸನದಲ್ಲಿ ಕುಳ್ಳಿರಿಸಿ ಷಟ್‌ಸ್ಥಲವನ್ನು ವಿಸ್ತರಿಸಬೇಕೆಂದಾಜ್ಞಾಪಿಸಿ ತಮ್ಮಿಷ್ಟಲಿಂಗದಲ್ಲಿ ಬಯಲಾದರು.

●

## ಶ್ರೀಜಗದ್ಗುರು ತೋಂಟದಾರ್ಯಾಯ ನಮಃ
## ೧೪ನೆಯ ಷಟ್‌ಸ್ಥಲಾಚಾರ್ಯಪಟ್ಟವು

ವಾತೋಽನಿಶಂ ವಹತು ಭಕ್ತಮನೋಭಿರಾಮಃ ।
ರಾಮೇ ಶನೈರವಿರಲಂ ಯತಿತೋಂಟದಾರ್ಯ- ।
ವೃದ್ಧೋ ಮಹಾಂತಯಮಿರಾಣ್ಮಲಯಾಚಲೋತ್ಥೋ ।
ದಿವ್ಯಾಗಮಾಪ್ರಸುಮವೃಂದಮರಂದವಾಹೀ ॥೫೪॥

ಶ್ರೀಜಗದ್ಗುರು ತೋಂಟದ ಮಹಾಂತಸ್ವಾಮಿಗಳಿಂದ ಷಟ್‌ಸ್ಥಲ ತತ್ತ್ವೋಪದೇಶಾಧಿಕಾರವನ್ನು ಪಡೆದ ತೋಂಟದ ಮಹಾಸ್ವಾಮಿಗಳು ಅಸಾಧಾರಣ ವೈರಾಗ್ಯಶಾಲಿಗಳಿದ್ದಾಗ್ಯೂ ತಮ್ಮ ಪರಮಪಾವನಂಗಳಾದ ಚರಣ ಸರೋರುಹಂಗಳನ್ನು ರೋಲಂಬಭಾವದಿಂದವಲಂಬಿಸಿದ ಭಕ್ತನಿಕುರಂಬವನ್ನು ಸಂತೋಷಪಡಿಸುವುದಕ್ಕೋಸ್ಕರ ಮತ್ತು ಗುರುಶಿಷ್ಯಭಾವವನ್ನು ಮರೆತು ಸ್ವಾತಂತ್ರ್ಯದಿಂದ ತಾವು ಅಪ್ರತಿಮ ವಿರಕ್ತರೆಂದು ಲೋಕದಲ್ಲಿ ಮೆರೆಯುತ್ತಿರುವ ಕೆಲವು ಕುಹಕಿಗಳ ಅಹಂಕಾರವನ್ನು ಸದೆಬಡಿಯುವುದಕ್ಕೋಸ್ಕರ ಲೋಕವ್ಯವಹಾರಾನುಗುಣವಾದ ವೃತ್ತಿಯನ್ನಾದರೂ ಕೈಕೊಂಡವರಾಗಿದ್ದರು. ಅದರಲ್ಲಿ ಮಹಾಸ್ವಾಮಿಗಳ ನಿಜವಾದ ಆಸಕ್ತಿಯು ಇರುತ್ತಿದ್ದಿಲ್ಲವೆಂಬುವುದು ಅವರ ಅನಿತರ ಸಾಧಾರಣವಾದ ವೈರಾಗ್ಯವನ್ನು ಅರಿತವರಿಗೆ ಗೋಚರವಾಗುತ್ತಿದ್ದಿತೇ ಹೊರತು ಸರ್ವರಿಗೂ ಗೋಚರವಾಗುತ್ತಿದ್ದಿಲ್ಲವು. ಆದುದರಿಂದ ಈ ಸ್ವಾಮಿಗಳನ್ನು ಬಹುತರ ಜನರು ಲೌಕಿಕಾಡಂಬರಕ್ಕೆ ಮನಸೋತವರನ್ನಾಗಿ ತಿಳಿಯುತ್ತಿದ್ದರು. ಆದರೂ ಒಂದೊಂದು ಪ್ರಸಂಗದಲ್ಲಿ ಮನವರಿಕೆಯಾಗಿ ಕಂಡುಬರುತ್ತಿದ್ದ ಶಾಪಾನುಗ್ರಹ ಶಕ್ತಿಯಿಂದ ತಿಳುವಳಿಕೆಯು ನಿರ್ಮೂಲವಾಗುತ್ತಿದ್ದಿತು. ಇದರಿಂದ ಲೌಕಿಕ ಪಾರಮಾರ್ಥಗಳೆರಡನ್ನು ಸಮವಾಗಿ ನಡಿಸಿಕೊಂಡುಹೋಗುತ್ತಿದ್ದ ಕುಶಲರು ಇವರೇಯೆಂದು ಹೇಳುವುದು ಅತಿಶಯೋಕ್ತಿಯಲ್ಲವು. ಈ ವಿಧವಾದ ಜಾಣ್ಮೆಯಿಂದ ಲೌಕಿಕ ಪಾರಮಾರ್ಥಗಳನ್ನುಅವಲಂಬಿಸಿದ ರಾಜಯೋಗಿಗಳಾದ ಮಹಾಸ್ವಾಮಿಗಳು ತಮ್ಮ ಹಿಂದಿನವರಿಗೆ ಅನೇಕ ರಾಜರು ಶಿಷ್ಟೋದ್ಧರಣ ದುಷ್ಟ ಸಂಹರಣರೂಪ ಸದ್ಧರ್ಮದ ಮೂಲವಾದ ಲಿಂಗಪೂಜಾರೂಪವಾದ ತಪಸ್ಸಿನ ನಿರರ್ಗಲತ್ವಕ್ಕೋಸ್ಕರ ಭಕ್ತಿಪುರಸ್ಸರವಾಗಿ ಇನಾಮಿನ ಸ್ವರೂಪದಿಂದ ಒಪ್ಪಿಸಿದ ಗ್ರಾಮಸೀಮಾದಿಗಳನ್ನು ಅವರ ಕೇವಲ ವೈರಾಗ್ಯಮೂಲಕವಾದ ಔದಾಸೀನ್ಯವನ್ನು ಕಂಡು ಬೇರೆಬೇರೆ ಮಠಗಳಲ್ಲಿರುವ ಚರಮೂರ್ತಿಗಳು ಮೊದಲಾದವರು ಅವ್ಯಾಹತವಾದ ಸ್ವಾತಂತ್ರ್ಯದಿಂದ ತಮ್ಮ ಪ್ರಭುತ್ವದ ವರೆಗೂ ಅನುಭವಿಸುತ್ತ ಬಂದುದನ್ನು ಸ್ವಕೀಯ ಲಿಂಗಪೂಜಾಮಹತ್ವದಿಂದಲೂ ಈಗಿನ ದೇಶಕಾಲಮಾನಕ್ಕೆ ಅನುಗುಣವಾಗಿ ಈಗಿನ ಸಮಪಕ್ಷಪಾತಿಗಳಾದ ರಾಜರ

ಸಹಾಯದಿಂದಲೂ ವಿಶೇಷವಾಗಿ ತಮ್ಮ ಕೃಪಾಕಟಾಕ್ಷಕ್ಕೆ ಪಾತ್ರರಾದ ಸದ್ಭಕ್ತರ ಸಹಾಯದಿಂದಲೂ ತಪ್ಪಿಸಿ ತಮ್ಮ ಗುರುಗಳ ಔದಾಸೀನ್ಯದಿಂದ ಖಾಲಸತ್ತ ಆಗಿ ಉಳಿದ ಇನಾಮುಭೂಮಿ, ಮಠ ಮುಂತಾದವುಗಳನ್ನು ತಮ್ಮ ವಶಕ್ಕೆ ತೆಗೆದು ಕೊಂಡರು. ಆಗ ತಮಗೆ ವಿಧೇಯರಾಗಿ ಬಂದಿದ್ದ ಕೆಲವು ವಿರಕ್ತದೇಶಿಕರಿಗೆ ಪರಮಾಂತಃಕರುಣದಿಂದ ಷಟ್‌ಸ್ಥಲತತ್ತ್ವೋಪದೇಶವನ್ನು ಮಾಡಿದರು. ಹೀಗೆ ಕೆಲ ದಿನಗಳ ವರೆಗೆ ಗುಪ್ತವಾದ ಶಿವಯೋಗದಿಂದ ಮಹಿಮಾತಿಶಯಗಳನ್ನು ತೋರಿಸುತ್ತೆ ಆನಂದಿಸುತ್ತಿದ್ದರು. ಕೊನೆಗೆ ತಮ್ಮ ಸನ್ನಿಧಿಯಲ್ಲಿ ಪ್ರೀತಿಪಾತ್ರರಾದ ಮರಿಗಳಾಗಿದ್ದ ಮೃತ್ಯುಂಜಯದೇವರಿಗೆ ಷಟ್‌ಸ್ಥಲಬೋಧಾಧಿಕಾರವನ್ನು ಕೊಟ್ಟು ಶೂನ್ಯಸಿಂಹಾಸನದಲ್ಲಿ ಕುಳ್ಳಿರಿಸಿ ಷಟ್‌ಸ್ಥಲಾಚಾರಸಂಪ್ರದಾಯವನ್ನು ಬೆಳೆಸುವಂತೆ ಆಜ್ಞಾಪಿಸಿ ಬ್ರಹ್ಮಸ್ಥಾನವನ್ನು ಭೇದಿಸಿ ಹೊರಹೊರಟು ನಿಜೇಷ್ಟ ಲಿಂಗದಲ್ಲಿ ನಿರಾಕಾರತೆಯನ್ನೈದಿದರು.

●

## ಶ್ರೀಜಗದ್ಗುರು ಮೃತ್ಯುಂಜಯ ತೋಂಟದ ಸಿದ್ಧಲಿಂಗಾಯ ನಮಃ
## ೧೫ನೆಯ ಷಟ್‌ಸ್ಥಲಾಚಾರ್ಯಪಟ್ಟವು

ಮೃತ್ಯುಂಜಯಂ ಮೃತ್ಯುಹರಂ ನಮಾಮಿ ।
ಸತಾಂ ಜಗತ್ಯಾಂ ಯತಿತೋಂಟದಾರ್ಯಾತ್ ।
ವೃದ್ಧಾಚ್ಚರೇಶತ್ವಮುಪಾತ್ತವಂತಂ ।
ಸತ್ಯಾಭಿಸಂಧಂ ತಪಸಾಂ ನಿಧಾನಂ ॥ ೧೫ ॥

ಹದಿನೈದನೆಯ ಶೂನ್ಯಪೀಠದ ಪ್ರಭುಗಳಾದ ಮೃತುಂಜ್ಯಯ ತೋಂಟದ ಮಹಾಸ್ವಾಮಿಗಳು ಯಮಶಿಕ್ಷಕನಾದ ರುದ್ರನ ಹಾಗೆ ತಮ್ಮ ಆಜ್ಞೆಯನ್ನು ವಿರೋಧಿಸಿದವರಿಗೆ ಭಯಂಕರರಾಗಿಯೂ ವಿಧೇಯರಾದವರಿಗೆ ಅತಿಶಾಂತ ರಾಗಿಯೂ ಇರುತ್ತಿದ್ದುದರಿಂದ ತಮ್ಮ ರೂಢವಾದ ಮೃತ್ಯುಂಜಯ ನಾಮ ಧೇಯವನ್ನು ಅಕ್ಷರಸಹ ಸಾರ್ಥಕ್ಯವನ್ನು ಹೊಂದಿದ್ದರು. ಇವರು ತಮ್ಮ ಪ್ರಭುತ್ವವನ್ನು ಈ ಲೋಕದಲ್ಲಿ ದುಷ್ಟಶಿಷ್ಟರ ಶಾಸನ ಪರಿಪಾಲನ ಕರ್ಮಗಳಲ್ಲಿ ಯಜಮಾನ ಸ್ವಾಮಿಗಳ ಹಾಗೆ ಬದ್ಧಾದರರಾಗಿ ಕೆಲವು ವರ್ಷಗಳಲ್ಲಿ ಪರಮಾನಂದ ದಿಂದ ತಮ್ಮ ಪ್ರಭುತ್ವವನ್ನು ಬೆಳಸಿ ಕೊನೆಯಲ್ಲಿ ತಮಗೆ ಸಕಲವಿಷಯಗಳಲ್ಲಿ ಅಭಿಮತರಾದ ಸಿದ್ಧೇಶ್ವರಸ್ವಾಮಿಗಳೆಂಬ ಚರಮೂರ್ತಿಗಳಿಗೆ ತಮ್ಮ ಷಟ್‌ಸ್ಥಲ

ಗುರುತ್ವವನ್ನು, ಶೂನ್ಯಪೀಠವನ್ನು ಕೊಟ್ಟು ಷಟ್‌ಸ್ಥಲಸಂಪ್ರದಾಯವನ್ನು ಬೆಳೆಸುವುದಕ್ಕೆ ನಿರೂಪಿಸಿ ಪರಾತ್ಪರಸ್ವರೂಪದಲ್ಲಿ ಬೆರೆತುಕೊಂಡರು.

●

## ಶ್ರೀಜಗದ್ಗುರು ತೋಂಟದ ಸಿದ್ಧಲಿಂಗಾರ್ಯಾಯ ನಮಃ
## ೧೬ ನೆಯ ಷಟ್‌ಸ್ಥಲಾಚಾರ್ಯಪಟ್ಟವು

ಮೃತ್ಯುಂಜಯೋ ಯಮಿವರಃ ಸ್ಥಲಷಟ್ಕತತ್ತ್ವ—।
ಬೋಧಾಧಿಕಾರಪದವೀಂ ಜಗತಾಂ ಹಿತಾಯ ।
ಯಸ್ಮೈದದೌ ಜಗತಿ ಶಾಂತಿಮತಾಂ ವರಾಯ ।
ಸಿದ್ಧೇಶರಃ ಶಮಧನಃ ಸ ಪುನಾತು ವಿಶ್ವಂ ॥ ೧೬ ॥

ಷೋಡಶ ಶೂನ್ಯಪೀಠಾಧಿಕಾರಿಗಳಾದ ಈಗಿನ ಶ್ರೀಜಗದ್ಗುರು ತೋಂಟದ ಸಿದ್ಧೇಶ್ವರ ಮಹಾಸ್ವಾಮಿಗಳವರು ಶಾಂತರೂ ಜಿತೇಂದ್ರಿಯರೂ ದೀನದಯಾಪರರೂ ಆಗಿರುವರಲ್ಲದೆ ವೀರಶೈವಮತಕ್ಕೆ ಮುಕುಟಪ್ರಾಯವಾದ ಈ ಸಂಸ್ಥಾನವನ್ನು ಈಗಿನ ಸರಕಾರದ ಆಡಳಿತೆಯಲ್ಲಿ ಅತ್ಯುನ್ನತ ಸ್ಥಿತಿಯನ್ನು ಹೊಂದುವುದಕ್ಕೆ ಅನುಗುಣಗಳಾದ ಅನೇಕ ಮಹತ್ಕಾರ್ಯಗಳನ್ನು ಮಾಡಿರುವರು. ಈ ಸಂಸ್ಥಾನದ ಉಚ್ಚಸ್ಥಿತಿಯನ್ನು ಸರ್ವಾತ್ಮನಾ ಕಾಣುತ್ತಿರುವ ಸಕಲ ಜನರಿಗೆ ಪ್ರತ್ಯಕ್ಷವಾದದ್ದೇ ಅದೆ. ಆದಾಗ್ಯೂ ಈ ಶ್ರೀಚರಣರವರ ಸಚ್ಚರಿತ್ರಪಠನದಿಂದ ಶಿವಭಕ್ತರ ಜಿಹ್ವೇಂದ್ರಿಯದ ಸಾಫಲ್ಯಕ್ಕಾಗಿ ಈ ಮಹಾಪ್ರಭುಗಳು ವೀರಶೈವ ಜನೋಪಕಾರಾರ್ಥವಾಗಿ ಮಾಡಿದ ಒಂದೆರಡು ಮಹತ್ಕೃತಿಗಳನ್ನು ಹೇಳಬೇಕಾಗಿದೆ. ಹದಿನೇಳನೆಯ ವರ್ಷದ ಪೂರ್ವದಲ್ಲಿ ಗದಗ ಗ್ರಾಮನಿವಾಸಿಗಳಾದ ಭಕ್ತ ಮಹಾಜನರು ವಿದ್ಯೆಯ ಕೊರತೆಯಿಂದ ವೀರಶೈವಮತವು ಬಹುದಿವಸಗಳಿಂದ ಅತ್ಯಂತ ದುರವಸ್ಥೆಗೆ ಪಾತ್ರವಾಗುತ್ತ ಬಂದಿದೆ. ಇದಕ್ಕೆ ಯೋಗ್ಯವಾದ ಉಪಾಯವನ್ನು ಕಲ್ಪಿಸದಿದ್ದರೆ ಇದಕ್ಕಿಂತಲೂ ಹೀನತೆಯನ್ನೈದುವುದು. ಇದರ ನಿವಾರಣಕ್ಕೆ ವಿದ್ಯಾಪ್ರಾಚುರ್ಯವೇ ಮುಖ್ಯವಾದ ಉಪಾಯವು. ಅದರಲ್ಲಿ ಶಾಸ್ತ್ರಾಭ್ಯಾಸ ಪ್ರಾಚುರ್ಯವು ಅತ್ಯಂತಮುಖ್ಯವಾದದ್ದು. ಯಾಕೆಂದರೆ ಪೂರ್ವಕಾಲದಲ್ಲಿ ಪ್ರಸಿದ್ಧರಾದ ಪಂಡಿತರಿಂದ ವೇದಾಗಮಮೂಲಕವಾಗಿ ರಚಿಸಲ್ಪಟ್ಟ ಗ್ರಂಥಗಳು ಶಾಸ್ತ್ರಪರಿಚಯವಿಲ್ಲದವರಿಗೆ ದುರ್ಬೋಧಗಳಾಗಿರುತ್ತವೆ. ಆ ಗ್ರಂಥಗಳ ಪ್ರಚಾರವಿಲ್ಲದೆ ನಮ್ಮ ಮತದ ನಿಜಸ್ಥಿತಿಯನ್ನು ನಾವೇ ತಿಳಿಯದೆ ಇರುವಲ್ಲಿ ಅನ್ಯಮತದವರು ಈ ಮತದ ತಥ್ಯಾಂಶವನ್ನರಿಯದೆ ಈ ಮತಕ್ಕೆ ಕುಂದನ್ನಿಡುವುದು ಸಹಜ

ವಾಗಿದೆ. ಆದುದರಿಂದ ನಮ್ಮ ಮತದವರಿಗೆ ಶಾಸ್ತ್ರಾಭ್ಯಾಸವನ್ನು ಮಾಡಿಸು ವುದು ಈ ಮತದ ಪ್ರಾಚೀನವಾದ ಉತ್ಕೃಷ್ಟ ದೆಶೆಯನ್ನು ಬಯಸುವ ನಮ್ಮ ಮುಖ್ಯಕರ್ತವ್ಯವಾಗಿದೆ ಎಂದು ಐಕ್ಯಮತದಿಂದ ವಿಚಾರಿಸುತ್ತಿರುವಷ್ಟರಲ್ಲಿ ಈ ಮಹಾಸ್ವಾಮಿಗಳು ನಮಗೆ ಪರಮಪ್ರೀತ್ಯಾಸ್ಪದರಾದ ಭಕ್ತಜನರನ್ನು ತಮ್ಮ ಸನ್ನಿಧಾನಕ್ಕೆ ಬರಮಾಡಿಕೊಂಡು ವೀರಶೈವಮತದ ಹೀನತೆಯನ್ನು ದೂರ ಮಾಡುವ ಯೋಗ್ಯೋಪಾಯವಾದ ಶಾಸ್ತ್ರಾಭ್ಯಾಸದ ಸೌಲಭ್ಯಕ್ಕಾಗಿ ಹತ್ತು ಸಹಸ್ರರೂಪಾಯಿಗಳನ್ನು ಆಶೀರ್ವದಿಸಿದರು. ಈಗಲೂ ಈ ಮೂಲಧನದ ಬಡ್ಡಿಯಿಂದ ಗದಗ ಗ್ರಾಮದಲ್ಲಿ ಶ್ರೀಮಜ್ಜಗದ್ಗುರು ತೋಂಟದಾರ್ಯ ಮಹಾ ಸ್ವಾಮಿಗಳವರ ಹೆಸರಿನಿಂದಲೇ ಒಂದು ಸ್ಥಿರವಾದ ವೀರಶೈವ ಸಂಸ್ಕೃತಪಾಠ ಶಾಲೆಯು ನಡೆಯುತ್ತಬಂದಿದೆ. ಈ ಶಾಲೆಯಲ್ಲಿ ಈ ಮೊದಲು ತರ್ಕ, ವ್ಯಾಕರಣ, ವೇದಾಂತ, ಸಾಹಿತ್ಯಾದಿಗಳಲ್ಲಿ ನೈಪುಣ್ಯವನ್ನು ಪಡೆದು ಆಯಾ ಗ್ರಾಮಗಳ ಪಾಠಶಾಲೆಗಳಲ್ಲಿ ಅಧ್ಯಾಪಕರಾಗಿ ವಿದ್ಯಾರ್ಥಿಗಳಿಗೆ ತಮ್ಮ ತಮ್ಮ ಯೋಗ್ಯತೆಯ ಮೇರೆಗೆ ಶಿಕ್ಷಣವನ್ನು ಕೊಡುತ್ತಿರುವುದು ಸರ್ವರಿಗೂ ವಿದಿತವಾದಂಶವೇ ಆಗಿದೆ. ಇದರ ಸರ್ವವಿಷಯವಾದ ವ್ಯವಸ್ಥೆಯು ಸರ್ವಶ್ರುತಪ್ರಾಯವಾದುದ ರಿಂದ ಅದರ ವಿಷಯದಲ್ಲಿ ವಿಶೇಷವಾಗಿ ಇಲ್ಲಿ ಬರೆಯುವುದು ಅವಶ್ಯವಿಲ್ಲವು. ಇಂಥ ಅನೇಕ ಜನೋಪಯುಕ್ತಗಳಾದ ಕೃತಿಗಳನ್ನು ಮಾಡುತ್ತಿರುವುದನ್ನು ಈಗಿನ ನ್ಯಾಯಾಭಿಮಾನಿಗಳಾದ ಸರಕಾರದವರು ಕಂಡು, ಈ ಮಹಾಸ್ವಾಮಿ ಗಳವರ ಹೆಸರನ್ನು ಬಹಳವಾಗಿ ಮನ್ನಿಸುತ್ತಿದ್ದಾರೆ.

**ಶ್ರೀಮನ್ನಿರಂಜನಜಂಗಮಾರ್ಪಣಮಸ್ತು.**

G. N. Nagaraj

# ವೀರಶೈವ ಅಧ್ಯಯನ ಸಂಸ್ಥೆಯ ಪ್ರಕಟನೆಗಳು

## ವೀರಶೈವ ಪುರಾತನ ಸಾಹಿತ್ಯ ರತ್ನಮಾಲೆ :

೧. ಕರ್ನಾಟಕ ಶಬ್ದಮಂಜರಿ (ವಿರಕ್ತ ತೋಂಟದಾರ್ಯ) ೪-೦೦, ೭-೦೦
ಸಂ. ವಿ. ಶಿವಾನಂದ

೨. ಷಟ್‌ಸ್ಥಲಜ್ಞಾನಸಾರಾಮೃತ ಬೆಡಗಿನ ವಚನದ ಟೀಕೆ ೬-೦೦, ೭-೦೦
(ಸೋಮಶೇಖರ ಶಿವಯೋಗಿ) ಸಂ. ಬಿ. ವಿ. ಶಿರೂರ

## ಬರಲಿರುವ ಗ್ರಂಥಗಳು :

೧. ಷಟ್‌ಸ್ಥಲಜ್ಞಾನಸಾರಾಮೃತ ವಚನದ ಟೀಕೆ
(ಸಮಗ್ರ ಸಂಪುಟ)

೨. ವೀರಶೈವಾಮೃತ ಮಹಾಪುರಾಣ
(ಗುಬ್ಬಿಯ ಮಲ್ಲಣಾರ್ಯ)

೩. ಶ್ರೀ ಸಿದ್ಧೇಶ್ವರ ಪುರಾಣ (ವಿರಕ್ತ ತೋಂಟದಾರ್ಯ)

## ವೀರಶೈವ ನೂತನ ಸಾಹಿತ್ಯ ರತ್ನಮಾಲೆ :

೧. ನಿರಂಜನಜಂಗಮವಂಶದರ್ಪಣ –ಬಸವಪ್ಪ ವೀರಪ ಕೋಟಿ ೩-೦೦

೨. ಶಾಸನಗಳಲ್ಲಿ ಶಿವಶರಣರು –ಎಂ. ಎಂ. ಕಲಬುರ್ಗಿ ೧೦-೦೦, ೧೨-೦೦

## ಬರಲಿರುವ ಗ್ರಂಥಗಳು :

೧. ವಚನಶಾಸ್ತ್ರಸಾರ ಸಂಪುಟ ೧-೨-೩
(ಲಿಂ. ಫ. ಗು. ಹಳಕಟ್ಟಿ)

೨. ಕೆಳದಿ ಅರಸರ ಕಾಲದ ಕನ್ನಡ ಸಾಹಿತ್ಯ

## ವೀರಶೈವ ಪುಣ್ಯಪುರುಷ ಸಾಹಿತ್ಯ ರತ್ನಮಾಲೆ :

೧. ಡೆಪ್ಯುಟಿ ಚೆನ್ನಬಸಪ್ಪನವರು
೨. ಸಕ್ಕರಿ ಕರಡೆಪ್ಪನವರು
೩. ವಾರದ ಮಲ್ಲಪ್ಪನವರು
೪. ಸಿರಸಂಗಿ ಲಿಂಗರಾಜರು
೫. ಸರ್ ಕೆ. ಪಿ. ಪುಟ್ಟಣ್ಣಶೆಟ್ಟರು
೬. ಹರ್ಡೇಕರ ಮಂಜಪ್ಪನವರು
೭. ಮಧುರ ಚೆನ್ನರು